WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೯, ೨೦೧೧ (ಆಶ್ವಯುಜ ೭, ಶಕ ವರ್ಷ ೧೯೩೩) | ಸಂಚಿಕೆ ೩೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಡಿಎಸ್‌ವೈ 2011 ದಿ: 3–5–2011.
2. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಶಾಖೆಗಳ ಮನವಿ.
3. ದಿ: 14–6–2011ರ ಸರ್ಕಾರದ ಪತ್ರ:ಕಸಂವಾಪ್ರ 140 ಸ್ವೀಮರ 2011.
4. ದಿ: 22–6–2011ರ ಮಾರುತಿ ಎಂಟರ್ ಪ್ರೈಸಸ್‌ರವರ ಪತ್ರ ಸಂಖ್ಯೆ:175/2011.

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಮನವಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಎಲ್ಲಾ ಶಾಖೆಗಳು ಲೇಖನ ಸಾಮಗ್ರಿ ಹಾಗೂ ಪೀಠೋಪಕರಣಗಳಿಗಾಗಿ ಮನವಿ ಸಲ್ಲಿಸಿದ್ದವು.

ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಹಾಗೂ ಪೀಠೋಪಕರಣಗಳನ್ನು ಖರೀದಿಸಲು 03 ಕಂಪನಿಗಳಿಂದ ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಇಲಾಖೆಗೆ ಅಗತ್ಯವಾಗಿ ಬೇಕಾಗುವ ಲೇಖನ ಸಾಮಗ್ರಿಗಳು ಹಾಗೂ ಪೀಠೋಪಕರಣಗಳ ಒಟ್ಟು ದರಪಟ್ಟಿಯು ಈ ಕೆಳಗಿನಂತಿರುತ್ತದೆ ಹಾಗೂ 3 ಕಂಪನಿಗಳ ತುಲನಾತ್ಮಕ ವಿವರವಾದ ದರ ಪಟ್ಟಿಯನ್ನು ಅನುಬಂಧ–I ಹಾಗೂ ಅನುಬಂಧ–II ರಲ್ಲಿ ವಿವರಿಸಲಾಗಿದೆ.

**ಲೇಖನ ಸಾಮಗ್ರಿ**

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ಮಾರುತಿ ಎಂಟರ್‌ಪ್ರೈಸಸ್ | ಲೇಖನ ಸಾಮಗ್ರಿಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 29578–64 |
| 2 | ರಂಗನಾಥ ಎಂಟರ್‌ಪ್ರೈಸಸ್ | ಲೇಖನ ಸಾಮಗ್ರಿಗಳು | | | 31442–05 |
| 3 | ಆರ್.ಕೆ. ಎಂಟರ್‌ಪ್ರೈಸಸ್ | ಲೇಖನ ಸಾಮಗ್ರಿಗಳು | | | 31332–00 |

**ಪೀಠೋಪಕರಣಗಳು**

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ | ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|---|
| 1 | ಮಾರುತಿ ಎಂಟರ್‌ಪ್ರೈಸಸ್ | ಪೀಠೋಪಕರಣಗಳು | ಅನುಬಂಧದಲ್ಲಿ ಲಗತ್ತಿಸಲಾಗಿದೆ | | 15851–25 |
| 2 | ರಂಗನಾಥ ಎಂಟರ್‌ಪ್ರೈಸಸ್ | ಪೀಠೋಪಕರಣಗಳು | | | 16697–52 |
| 3 | ಆರ್.ಕೆ. ಎಂಟರ್‌ಪ್ರೈಸಸ್ | ಪೀಠೋಪಕರಣಗಳು | | | 16654–58 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಮಾರುತಿ ಎಂಟರ್‌ಪ್ರೈಸಸ್, ನಂ. 43, ಜರಗನಹಳ್ಳಿ, ಜಿ.ಕೆ.ಎಂ. ಕಾಲೇಜ್ ರಸ್ತೆ, ಅಣ್ಣಯಪ್ಪ ಲೇಔಟ್, ಬೆಂಗಳೂರು–560078ರವರೆಗೆ ರೂ. 29578–64 ಗಳ (ಇಪ್ಪತ್ತೊಂಬತ್ತು ಸಾವಿರದ ಐದು ನೂರ ಎಪ್ಪತ್ತೆಂಟು ರೂಪಾಯಿ ಅರವತ್ತನಾಲ್ಕು ಪೈಸೆಗಳು ಮಾತ್ರ) ವೆಚ್ಚದಲ್ಲಿ ಲೇಖನ ಸಾಮಗ್ರಿ ಹಾಗೂ ಪೀಠೋಪಕರಣಗಳನ್ನು ರೂ. 15851–25 (ಹದಿನೈದು ಸಾವಿರದ ಎಂಟು ನೂರ ಐವತ್ತೊಂದು ರೂ.ಗಳು ಮಾತ್ರ) ವೆಚ್ಚದಲ್ಲಿ ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 140 ಸ್ವೀಮರ 2011 ಬೆಂಗಳೂರು, ದಿ: 01–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಎಲ್ಲಾ ಶಾಖೆಗಳಿಗೆ ಲೇಖನ ಸಾಮಗ್ರಿ ಹಾಗೂ ಪೀಠೋಪಕರಣಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧ–1 ರಲ್ಲಿರುವ ಲೇಖನ ಸಾಮಗ್ರಿಗಳಿಗೆ ಅತಿ ಕಡಿಮೆ ದರ ರೂ. 29578–64 ಗಳ (ಇಪ್ಪತ್ತೊಂಬತ್ತು ಸಾವಿರದ ಐದು ನೂರ ಎಪ್ಪತ್ತೆಂಟು ರೂಪಾಯಿ ಅರವತ್ತನಾಲ್ಕು ಪೈಸೆಗಳು ಮಾತ್ರ) ಹಾಗೂ ಅನುಬಂಧ–2 ರಲ್ಲಿರುವ ಪೀಠೋಪಕರಣಗಳಿಗೆ ಅತಿ ಕಡಿಮೆ ದರ ರೂ. 15851–25 (ಹದಿನೈದು ಸಾವಿರದ ಎಂಟು ನೂರ ಐವತ್ತೊಂದು ರೂ.ಗಳು ಮಾತ್ರ) ಗಳನ್ನು ಸೂಚಿಸಿರುವ ಮಾರುತಿ ಎಂಟರ್‌ಪ್ರೈಸಸ್, ನಂ. 43, ಜರಗನಹಳ್ಳಿ, ಜಿ.ಕೆ.ಎಂ. ಕಾಲೇಜ್ ರಸ್ತೆ, ಅಣ್ಣಯಪ್ಪ ಲೇಔಟ್, ಬೆಂಗಳೂರು–560078ರವರಿಗೆ ಲೇಖನ ಸಾಮಗ್ರಿ ಹಾಗೂ ಪೀಠೋಪಕರಣಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 3 ಡಿಎಸ್‌ವೈ 2011 ದಿನಾಂಕ: 3–5–2011ರಲ್ಲಿ ನೀಡಿರುವ ಆದೇಶದನ್ವಯ ಭರಿಸಲು ಮಾರುತಿ ಎಂಟರ್‌ಪ್ರೈಸಸ್ ಕಂಪನಿಗೆ ರೂ. 29578.64 ಗಳ (ಇಪ್ಪತ್ತೊಂಬತ್ತು ಸಾವಿರದ ಐದು ನೂರ ಎಪ್ಪತ್ತೆಂಟು ರೂಪಾಯಿ ಅರವತ್ತನಾಲ್ಕು ಪೈಸೆಗಳು ಮಾತ್ರ) ಹಾಗೂ ರೂ. 15851–25 (ಹದಿನೈದು ಸಾವಿರದ ಎಂಟು ನೂರ ಐವತ್ತೊಂದು ರೂ.ಗಳು ಮಾತ್ರ) ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಮಾರುತಿ ಎಂಟರ್‌ಪ್ರೈಸಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಕೂಡಲೇ ಲೇಖನ ಸಾಮಗ್ರಿ ಹಾಗೂ ಪೀಠೋಪಕರಣಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ANNEXURE-I TO G.O. NO. KCIT 140 R&I 2011, Dated: 01-07-2011**

**Comparative Statement**

| Sl. No. | Particulars | Qty. | Maruthi Enterprises | Ranganatha Enterprises | R.K. Enterprises |
|---|---|---|---|---|---|
| 1 | Canon 328 ಪ್ರಿಂಟರ್ ಕಾಟ್ರೇಜ್ | 02 | 8988-00 | 9229-00 | 9166-50 |
| 2 | ಪ್ರಿಂಟರ್ ಕಾಟ್ರೇಜ್ ಎಂ. ಎಲ್. 1640 | 02 | 7996-00 | 8326-50 | 8274-00 |
| 3 | ಪ್ರಿಂಟರ್ ಕಾಟ್ರೇಜ್ HP Laser-Jet 12A-1010 | 01 | 3978-45 | 4071-90 | 3987-90 |
| 4 | ಜೆರಾಕ್ಸ್ ಟೋನರ್ ಶಾರ್ಪ್ ಎ.ಆರ್.ಎಂ.205 | 01 | 5320-00 | 5701-50 | 5738-25 |
| 5 | ಟೋನರ್ ಜೆರಾಕ್ಸ್ ಮಿಷಿನ್ (106 R00 280) | 01 | 1869-00 | 2273-25 | 2307-00 |
| 6 | ಟೋನರ್ 1025/1038,5216/5223 | 01 | 519-75 | 745-50 | 729-75 |
| 7 | ಕಪ್ ಅಂಡ್ ಸಾಸರ್ | 02 | 907-44 | 1094-40 | 1128-60 |
| | ಒಟ್ಟು | | 29578-64 | 31442-05 | 31332-00 |

| | | |
|---|---|---|
| Maruthi Enterprises | - | 29578-64 |
| Ranganatha Enterprises | - | 31442-05 |
| R.K. Enterprises | - | 31332-00 |

**N. Geethakumari**

Under Secretary to Government,

Kannada and Culture, Information and

Tourism Department

**ANNEXURE-2 TO G.O. NO. KCIT 140 R&I 2011, Dated: 01-07-2011**

**Comparative Statement**

| Sl. No. | Particulars | Qty. | Maruthi Enterprises | Ranganatha Enterprises | R.K. Enterprises |
|---|---|---|---|---|---|
| 1 | Executive visitors Chair | 02 | 6384-00 | 6805-80 | 6817-20 |
| 2 | Executive Chair with Revolving | 01 | 3705-00 | 3944-40 | 3858-90 |
| 3 | ಟ್ರೇ | 01 | 90-00 | 94-62 | 98-04 |
| 4 | ಟೇಬಲ್ ಗ್ಲಾಸ್ | 02 | 4218-00 | 4309-20 | 4327-44 |
| 5 | ಕಿಟಕಿ ಕರ್ಟನ್ | 01 | 997-50 | 1034-25 | 1029-00 |
| 6 | ವಾಲ್ ಕ್ಲಾಕ್ | 01 | 456-75 | 509-25 | 524-00 |
| | ಒಟ್ಟು | | 15851-25 | 16697-52 | 16654-58 |

Maruthi Enterprises - 15851-25

Ranganatha Enterprises - 16697-52

R.K. Enterprises - 16654-58

**N. Geethakumari**
Under Secretary to Government,
Kannada and Culture, Information and
Tourism Department

ಪಿ.ಆರ್. 1740

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಮಂಗಳೂರು ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಎಂ/ಸಿಆರ್–10/2010, ದಿನಾಂಕ 09–03–2011.
2. ತನಿಖಾಧಿಕಾರಿಯ ವರದಿ ಸಂಖ್ಯೆ: ಪಿಐ/ಲೋಕ್/ಮಂ/ಅ.ಕ್ರ 10/2010, ದಿನಾಂಕ 09–09–2010.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ ಮಂಗಳೂರು ಇವರ ವಿರುದ್ಧ ಗುನ್ಹೆ ಸಂಖ್ಯೆ: 10/2010 ರಲ್ಲಿ ಆರಕ್ಷಕ ನಿರೀಕ್ಷಕರು ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಂಗಳೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2 & 3) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 09–03–2011ರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–/ಸಿಆರ್–10/2010, ಇದರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ–1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–/ಸಿಆರ್–10/2010, ಮಂಗಳೂರು ದಿನಾಂಕ 09–03–2011 ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಬಲರಾಮ, ವಿನಾಯಕ ಕೃಪ, ಗೋವಿಂದ ದಾಸ ಕಾಲೇಜು ಹಿಂಭಾಗ, ಸೂರತ್‌ಕಲ್, ಮಂಗಳೂರು ಇವರ ಫಿರ್ಯಾದಿ ದಿನಾಂಕ 08–09–2010.
2) ಪ್ರಥಮ ವರ್ತಮಾನ ವರದಿ ಮಂಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 10/2010.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 08–09–2010
4) ಟ್ರ್ಯಾಪ್‌ನ ಮಹಜರ್ ದಿನಾಂಕ 08–09–2010
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: MRL/LOK/20/10-11, Dated 12-10-10
6) ಕೃತ್ಯ ನಡೆದ ಸ್ಥಳದ ನಕಾಶೆ: ಜಿಲ್ಲಾ ಉದ್ಯೋಗ ವಿನಿಮಯ ಕಛೇರಿ, ಮಂಗಳೂರು ಮಹಾನಗರ ಪಾಲಿಕೆ ಕಛೇರಿ ಕಟ್ಟಡ, ಎಂ.ಜಿ. ರಸ್ತೆ, ಲಾಲ್‌ಬಾಗ್, ಮಂಗಳೂರು.
7) ಸಾಕ್ಷಿಗಳ ಹೇಳಿಕೆಗಳು
    1) ಶ್ರೀ ಬಲರಾಮ, ಮಂಗಳೂರು

2) ಶ್ರೀ ಚರಣ್, ಎಂ. ಜೆ. ಗ್ರಾಮ ಕರಣಿಕರು, ಮಂಗಳೂರು
3) ಶ್ರೀ ಮೊಹಮ್ಮದ್ ಮುನೀರ್, ಗ್ರಾಮ ಕರಣಿಕರು, ತಾಲ್ಲೂಕು ಕಛೇರಿ, ಮಂಗಳೂರು
4) ಶ್ರೀ ವಿಶ್ವನಾಥ್, ಅಸಿಸ್ಟೆಂಟ್ ಡೈರೆಕ್ಟರ್/ಡೆಪ್ಯುಟಿ ಚೀಫ್, ಎಂಪ್ಲೋಯ್‌ಮೆಂಟ್ ಗೈಡೆನ್ಸ್ ಬ್ಯುರೋ ಮಂಗಳಗಂಗೋತ್ರಿ, ಕೋಣಾಜೆ, ಮಂಗಳೂರು.
5) ಶ್ರೀ ರಿತೇಶ್, ಮಂಗಳೂರು
6) ಶ್ರೀ ಲಿಂಗಪ್ಪ, ಮಂಗಳೂರು
7) ಶ್ರೀ ಮೋಹನ್, ಮಂಗಳೂರು
8) ಶ್ರೀ ಜಗದೀಶ್, ಎ. ಹೆಚ್. ಮಂಗಳೂರು
9) ಕುಮಾರಿ ಪ್ರತಿಮಾ, ಮಂಗಳೂರು
10) ಶ್ರೀ ಜೆರಾಲ್ಡಾ ಕ್ರಾಸ್ತಾ, ಮಂಗಳೂರು
11) ಶ್ರೀ ರಾಜೇಶ್ ರೈ, ಜ್ಯೂನಿಯರ್ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು.
12) ಶ್ರೀಮತಿ ರಾಜೇಶ್ವರಿ, ಸಹಾಯಕ ರಸಾಯನಿಕ ವಿಶ್ಲೇಷಕರು, ರಸಾಯನಿಕ ವಿಶ್ಲೇಷಕರ ಕಛೇರಿ, ಮಂಗಳೂರು.
13) ಶ್ರೀ ಶಾಂತಪ್ಪ, ಎಂ. ಹೆಚ್.ಸಿ. 1148 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
14) ಶ್ರೀಮತಿ ಸುಮತಿ ಮ.ಪಿ.ಸಿ. 2261 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
15) ಶ್ರೀ ಶಿವಪ್ರಸಾದ್, ಎಸ್. ವಿ. ಪಿ.ಸಿ. 594 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
16) ಶ್ರೀ ಶರತ್‌ಚಂದ್ರ, ಪಿ.ಸಿ. 2121 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
17) ಶ್ರೀ ಲುಕೋಸ್ ಸಿಪಿಸಿ 1942 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
18) ಶ್ರೀ ಲಕ್ಷ್ಮೀಕಾಂತ, ಪಿ.ಸಿ. 1925 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
19) ಶ್ರೀ ಶಶಿಧರ, ಪಿಸಿ 1940, ಕರ್ನಾಟಕ ಲೋಕಾಯುಕ್ತ, ಮಂಗಳೂರು
20) ಶ್ರೀ ಸುದರ್ಶನ್, ಹೆಚ್.ಸಿ. 850 ಕರ್ನಾಟಕ ಲೋಕಾಯುಕ್ತ ಠಾಣೆ, ಮಂಗಳೂರು
21) ಶ್ರೀ ಪ್ರಮೋದ್, ಎ.ಪಿ.ಸಿ. 138 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
22) ಶ್ರೀ ಬಾಬು, ಎ.ಪಿ.ಸಿ. 186 ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
23) ಶ್ರೀ ಸದಾನಂದ ವರ್ಣೇಕರ್, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಂಗಳೂರು
24) ಶ್ರೀ ಉದಯ ಎಂ. ನಾಯಕ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮಂಗಳೂರು

8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:

1) ಜಿಉವಿಕೆ ಮಂಗಳೂರು ಸಿಜಿಕ್ಯೂ/38–61 (ಅವಧಿ ಮೀರಿದ ಅರ್ಜಿಯನ್ನು ಎಂ.ಆರ್.ಪಿ.ಎಲ್.ಗೆ ಕಳುಹಿಸಿಕೊಡುವ ಬಗ್ಗೆ)

9) ಆಪಾದಿತರ ಸಮಜಾಯಿಷಿ ಹೇಳಿಕೆಗಳು:

ತನಿಖಾಧಿಕಾರಿಗಳಾದ ಶ್ರೀ ಉದಯ ಎಂ. ನಾಯಕ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮಂಗಳೂರು ಇವರು ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ದಿನಾಂಕ 08–09–2010 ರಂದು ಕರ್ನಾಟಕ ಲೋಕಾಯುಕ್ತ, ಮಂಗಳೂರು ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 10/2010ರಲ್ಲಿ ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)ಡಿ ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ರವರು ಫಿರ್ಯಾದಿಯಾದ ಶ್ರೀ ಬಲರಾಮ ವಿನಾಯಕ ಕೃಪ, ಗೋವಿಂದ ದಾಸ ಕಾಲೇಜು ಹಿಂಭಾಗ, ಸೂರತ್‌ಕಲ್, ಮಂಗಳೂರು ಇವರ ಅವಧಿ ಮೀರಿದ ಅರ್ಜಿಯನ್ನು ಎಂ.ಆರ್.ಪಿ.ಎಲ್.ಗೆ ಕಳುಹಿಸಿಕೊಡಲು ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಗಳ ಲಂಚಕ್ಕೆ ಒತ್ತಾಯಿಸಿ, ಫಿರ್ಯಾದಿದಾರರು ಚೌಕಾಸಿ ಮಾಡಿದ ನಂತರ ಲಂಚದ ಹಣ ರೂ. 5,000/–ಕ್ಕೆ ತೀರ್ಮಾನವಾಗಿ ಅದೇ ದಿನ ಆರೋಪಿತರು ರೂ. 1,000/– ಲಂಚದ ಹಣವನ್ನು ಸ್ವೀಕರಿಸಿ, ಉಳಿದ ರೂ. 4,000/–ನ್ನು ಸ್ವೀಕರಿಸುವಾಗ ದಿನಾಂಕ 08–09–2010 ರಂದು ಜಿಲ್ಲಾ ಉದ್ಯೋಗ ವಿನಿಮಯ ಕಛೇರಿ, ಮಂಗಳೂರು ಮಹಾನಗರ ಪಾಲಿಕೆ ಕಛೇರಿ ಕಟ್ಟಡ, ಎಂ.ಜಿ. ರಸ್ತೆ, ಲಾಲ್‌ಬಾಗ್, ಮಂಗಳೂರು ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ರವರು ಅಕ್ರಮ ಸಂಭಾವನೆಯಾದ ರೂ. 4,000/–ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಉದ್ಯೋಗ ಅಧಿಕಾರಿಯ ಬಲಗೈ ಹಸ್ತ ಮತ್ತು ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳಸಿದಾಗ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಅಕ್ರಮ ಸಂಭಾವನೆಯಾದ ರೂ. 4,000/–ಗಳನ್ನು ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ಇಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ–1988 ರ ಕಲಂ 7, 13(1)(ಡಿ) ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆಯೆಂದು ಸರ್ಕಾರವು ಪರಿಗಣಿಸಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. (ಈ ಬಗ್ಗೆ ಸಂಬಂಧಿಸಿದ ಕಾಯ್ದೆ, ನಿಯಮ, ಸರ್ಕಾರದ ನಡವಳಿ, ಆಜ್ಞೆ ಅಥವಾ ಅಧಿಸೂಚನೆ ಇತ್ಯಾದಿಗಳನ್ನು ನಮೂದಿಸಬೇಕು. ತಾನು ಹೇಗೆ ಸಕ್ಷಮ ಪ್ರಾಧಿಕಾರ ಅನ್ನುವುದನ್ನು ವಿವರಿಸಬೇಕು ಹಾಗೂ ರುಜುವಾತು ಮಾಡಬೇಕು ಸಂಬಂಧಿಸಿದ ದಾಖಲೆಗಳ ಪ್ರತಿಗಳನ್ನು ಅಡಕಗೊಳಿಸಬೇಕು) ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಎಸ್.ಡಿ. ಬಸವರಾಜು, ಉದ್ಯೋಗಾಧಿಕಾರಿ ರವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 50 ಇಟಿಎಕ್ಸ್ 2010, ಬೆಂಗಳೂರು, ದಿನಾಂಕ : 6–7–2011**

ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ಇವರ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭಿಯೋಜನೆಗೆ ಒಳಪಡಿಸಲು ಈಗಾಗಲೇ ಸರ್ಕಾರವು ಹೊರಡಿಸಿರುವ ಆದೇಶ ಸಂಖ್ಯೆ: ಕಾಇ 50 ಇಟಿಎಕ್ಸ್ 2010 ದಿನಾಂಕ 04–05–2011ನ್ನು ಪರಿಷ್ಕರಿಸಿ ಆರೋಪಿಯಾದ ಶ್ರೀ ಎಸ್. ಡಿ. ಬಸವರಾಜು, ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ/(ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಸ್. ಡಿ. ಬಸವರಾಜು, ಜಿಲ್ಲಾ ಉದ್ಯೋಗ ವಿನಿಮಯ ಕಛೇರಿ ಮಂಗಳೂರು ಮಹಾನಗರ ಪಾಲಿಕೆ ಕಛೇರಿ ಕಟ್ಟಡ, ಎಂ. ಜಿ. ರಸ್ತೆ, ಲಾಲ್‌ಬಾಗ್, ಮಂಗಳೂರು ಇವರನ್ನು ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

ಪಿ.ಆರ್. 1741

## FOREST, ECOLOGY AND ENVIRONMENT SECRETARIAT

**Sub :** Diversion of 9.15 ha. of forest land for wind energy in Jogimatti RF in favour of M/s ARC Power Generation (P) Ltd.,-Enhancement of allotted capacity of wind power project from 5 MW to 8 MW Reg.

**Read :**

1. Govt. Order No. FEE 112 FGL 2000, dated 04-12-2004
2. Letter No. A5(5)GFL.CR.4/2000-01, dated 18-09-2007 of Principal Chief Conservator of Forests, Bangalore.
3. State Government letter No. FEE 108 FLL 2007, dated 04-10-2007.
4. Letter F©A/11.2/222/KAR/2028, dated 28-02-2008 of Government of India, Ministry of Environment and Forests, Regional Office, Bangalore.
5. Letter No. A5(5)GFL.CR.4/2000-01, dated 12-06-2008 of Principal Chief Conservator of Forests, Bangalore.
6. State Government letter No. FEE 108 FLL 2007, dated 13-08-2009.
7. Letter No. F©A/11.2/222/KAR/9234, dated 08-06-2011 of Government of India, Ministry of Environment and Forests, Regional Office, Bangalore.

**Preamble :**

In Government Order read at (1) above for a diversion of 9.15 ha. of forest land for setting up of 5 MW Wind Power project in Jogimatti Reserve Forest Sy. No. 26 of Chitradurga Village in favour of M/s ARC Power Generation Limited, Bangalore lease for a period of 30 years, has been permitted.

The Principal Chief Conservator of Forests, Bangalore vide his letter dated 18-09-2007 read at (2) above has submitted the proposal as per the Energy Department vide their Order No. EN 42 NCE 2007, dated 15-02-2007 to obtain the approval of Government of India under Section 2 of The Forest (Conservation) Act, 1980 for revised land use plan for enhancement of capacity from 5 MW to 8 MW Wind Power Project in Jogimatti Reserve Forest Sy. No. 26 of Chitradurga Village in favour of M/s. ARC Power Generation Limited, Bangalore.

Accordingly the proposal was recommended to Government of India vide State Government letter dated 04-10-2007 read at (3) above.

The Government of India, Ministry of Environment and Forests, Regional Office, Bangalore vide their letter dated 28-02-2008 read at (4) above has given its in Principle (Stage I) approval for the revised land use pattern and enhancement of power capacity from 5 MW to 8 MW with certain conditions in favour of M/s ARC Power Generation (PL) Ltd., Gulbarga.

The Principal Chief Conservator of Forests, Bangalore vide his letter dated 12-06-2008 has furnished the compliance report read at (5) above and the same has been sent to Government of India vide State Government letter dated 13-08-2009 read at (6) above.

Government of India Ministry of Environment and Forests, Regional Office, Bangalore vide their letter dated 08-06-2011 read at (7) above has conveyed its approval (State-II) under Section 2 of the Forest (Conservation) Act, 1980 for revised land use pattern for enhancement of power capacity of wind power project from 5 MW to 8 MW in Jogimatti RF in favour of M/s ARC Power Generation (PL) Ltd., subject to certain conditions.

The proposal has been examined in detail and hence the Order

**Government Order No. FEE 108 FLL 2007, Bangalore, dated 05-07-2011**

In the circumstances explained in the preamble above, Government are pleased to accord sanction under section 2 of The Forest (Conservation) Act, 1980 for revised land use pattern for enhancement for power capacity of wind power project from 5 MW to 8 MW in Jogimatti RF in favour of M/s ARC Power Generation (PL) Ltd., subject to the following conditions.

1. The Principal Chief Conservator of Forests shall ensure all conditions stipulated in Government Order No. FEE 112 FGL 2000, dated 04-12-2004.
2. The Principal Chief Conservator of Forests shall furnish the co-ordinates of the corner pillars of the diverted forest area to the Ministry of Environment and Forests, Regional Office, Bangalore directly.

By Order and in the name of the Governor of Karnataka
**H. M. Mallikarjuna Swamy**
Under Secretary to Government
Forest, Ecology and Environment Department

P.R. 1742

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಜಲ್ಲಿಕಲ್ಲು ಕ್ರಷರ್ ಘಟಕಗಳನ್ನು ಸುರಕ್ಷಿತ ಪ್ರದೇಶಗಳಿಗೆ ಸ್ಥಳಾಂತರಿಸುವ ವಿಷಯದಲ್ಲಿ ಒಂದು ಸಮಗ್ರ ಕರಡು ಶಾಸನವನ್ನು ಸಿದ್ಧಪಡಿಸಲು ತಜ್ಞರ ಸಮಿತಿ ರಚಿಸುವ ಬಗ್ಗೆ.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ಜಲ್ಲಿಕಲ್ಲು ಕ್ರಷರ್ ಘಟಕಗಳನ್ನು ಸುರಕ್ಷಿತ ಪ್ರದೇಶಗಳಿಗೆ ಸ್ಥಳಾಂತರಿಸುವ ವಿಚಾರದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 17078/1997 ಇದರಲ್ಲಿ ದಿನಾಂಕ 10–07–1998ರಲ್ಲಿ ಹೊರಡಿಸಿರುವ ಆದೇಶವನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ 08–05–2009ರಲ್ಲಿ ಹೊರಡಿಸಿರುವ ಆದೇಶದ ಪ್ರಕಾರ ಸ್ಥಿರೀಕರಿಸಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸಿವಿಲ್ ಅಪೀಲ್ ಸಂಖ್ಯೆ: 7041/2011ರ ಮೇಲೆ ಸಲ್ಲಿಸಲಾಗಿದ್ದ ಐಎ2/2011ರ ಮೇಲೆ ದಿನಾಂಕ 11–03–2011ರಂದು ಹೊರಡಿಸಿದ ಆದೇಶದಲ್ಲಿ ಜಲ್ಲಿಕಲ್ಲು ಕ್ರಷರ್ ಘಟಕಗಳನ್ನು ಸುರಕ್ಷಿತ ಪ್ರದೇಶಗಳಿಗೆ ಸ್ಥಳಾಂತರಿಸುವ ವಿಚಾರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಕಾರ್ಯಗತಗೊಳಿಸಲು ಆರು ತಿಂಗಳ ಕಾಲಾವಕಾಶವನ್ನು ನೀಡಿದೆ. ಜಲ್ಲಿಕಲ್ಲು ಕ್ರಷರ್ ಘಟಕಗಳಿಂದ ಉಂಟಾಗುವ ಮಾಲಿನ್ಯವನ್ನು ನಿಯಂತ್ರಣ ಮಾಡುವ ದೃಷ್ಟಿಯಿಂದ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಹಲವಾರು ನಿರ್ದೇಶನಗಳನ್ನು ನೀಡಿದ್ದು, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಮತ್ತು ಸರ್ವೋಚ್ಚ ನ್ಯಾಯಾಲಯವು ಸಹ ಈ ದಿಸೆಯಲ್ಲಿ ನಿರ್ದೇಶನಗಳನ್ನು ನೀಡಿರುವುದರಿಂದ, ಅವುಗಳನ್ನೆಲ್ಲಾ ಒಗ್ಗೂಡಿಸಿ, ಒಂದು ಸಮಗ್ರವಾದ ಕರಡು ಶಾಸನವನ್ನು ರಚಿಸಿ, ಕರ್ನಾಟಕ ಜಲ್ಲಿಕಲ್ಲು ಕ್ರಷರ್ ಘಟಕಗಳ ನಿಯಂತ್ರಣ ವಿಧೇಯಕವನ್ನು ಹೊರಡಿಸಬೇಕಾಗಿದೆ. ಈ ವಿಧೇಯಕದ ಜಾರಿಯಿಂದ ಮೇಲ್ಕಂಡ ಎಲ್ಲಾ ನಿರ್ದೇಶನಗಳನ್ನು ಜಾರಿಗೊಳಿಸುವ ಮೂಲಕ ಮಾಲಿನ್ಯ ಪ್ರಮಾಣವನ್ನು ಕಡಿಮೆಗೊಳಿಸಲು ಹಾಗೂ ಇದರಿಂದುಂಟಾಗುವ ದುಷ್ಪರಿಣಾಮಗಳನ್ನು ತಪ್ಪಿಸಲು ಸಹಕಾರಿಯಾಗುತ್ತದೆ. ಇಂತಹ ಒಂದು ಸಮಗ್ರ ಶಾಸನದ ಕರಡನ್ನು ಘನ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು ಮತ್ತು ಪರಿಣಿತರನ್ನೊಳಗೊಂಡ ಸಮಿತಿಯ ಮೂಲಕ ರಚಿಸುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ.

ಈ ಹಿನ್ನೆಲೆಯಲ್ಲಿ, ಜಲ್ಲಿಕಲ್ಲು ಕ್ರಷರ್ ಘಟಕಗಳಿಂದುಂಟಾಗುವ ಮಾಲಿನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ ಜಾರಿಯಲ್ಲಿರುವ ಎಲ್ಲಾ ಮಾರ್ಗಸೂಚಿಗಳು, ನಿರ್ದೇಶನಗಳು ಹಾಗೂ ನ್ಯಾಯಾಲಯಗಳ ಆದೇಶಗಳನ್ನೊಳಗೊಂಡಂತೆ ಒಂದು ಸಮಗ್ರ ಶಾಸನ ರಚನೆಗೆ ಕರಡು ತಯಾರಿಸುವುದಕ್ಕಾಗಿ ಕೆಳಕಂಡವರನ್ನೊಳಗೊಂಡ ಸಮಿತಿಯನ್ನು ರಚಿಸಲು ನಿರ್ಧರಿಸಲಾಗಿದೆ.

| | | |
|---|---|---|
| 1 | ನ್ಯಾಯಮೂರ್ತಿ ಶ್ರೀ ಗುರುರಾಜನ್‌ರವರು,<br>ನಿವೃತ್ತ ನ್ಯಾಯಮೂರ್ತಿಗಳು, ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ | ಸದಸ್ಯರು |
| 3 | ಡಾ॥ ಮುದಕವಿ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| 4 | ಪ್ರೊಫೆಸರ್ ಎಸ್. ಮಂಜಪ್ಪ, ಅಧ್ಯಕ್ಷರು, ತಾಂತ್ರಿಕ ಸಲಹಾ ಸಮಿತಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯರು |
| 5 | ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯ–ಸಮಾವೇಶಕರು |

ಅದರಂತೆ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 11 ಇಎಐ 2009, ಬೆಂಗಳೂರು, ದಿನಾಂಕ : 04–07–2011**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಜಲ್ಲಿಕಲ್ಲು ಕ್ರಷರ್ ಘಟಕಗಳಿಂದುಂಟಾಗುವ ಮಾಲಿನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ ಜಾರಿಯಲ್ಲಿರುವ ಎಲ್ಲಾ ಮಾರ್ಗಸೂಚಿಗಳು, ನಿರ್ದೇಶನಗಳು ಹಾಗೂ ನ್ಯಾಯಾಲಯಗಳ ಆದೇಶಗಳನ್ನೊಳಗೊಂಡಂತೆ ಒಂದು ಸಮಗ್ರ ಶಾಸನ ರಚನೆಗೆ ಕರಡು ತಯಾರಿಸುವುದಕ್ಕಾಗಿ ಕೆಳಕಂಡವರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ನ್ಯಾಯಮೂರ್ತಿ ಶ್ರೀ ಗುರರಾಜನ್‌ರವರು,<br>ನಿವೃತ್ತ ನ್ಯಾಯಮೂರ್ತಿಗಳು, ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ | ಸದಸ್ಯರು |

| | | |
|---|---|---|
| 3 | ಡಾ॥ ಮುದಕವಿ, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| 4 | ಪ್ರೊಫೆಸರ್ ಎಸ್. ಮಂಜಪ್ಪ, ಅಧ್ಯಕ್ಷರು, ತಾಂತ್ರಿಕ ಸಲಹಾ ಸಮಿತಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯರು |
| 5 | ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯ–ಸಮಾವೇಶಕರು |

ಈ ಸಮಿತಿಯು ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 17078/1997 ಇದರಲ್ಲಿ ದಿನಾಂಕ 10–07–1998ರಲ್ಲಿ ಹೊರಡಿಸಿರುವ ಆದೇಶ, ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ 8–5–2009/11–3–2011ರ ಆದೇಶ, ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ಮಾರ್ಗಸೂಚಿ/ನಿರ್ದೇಶನಗಳು ಮುಂತಾದ ಎಲ್ಲಾ ಆದೇಶಗಳು ಹಾಗೂ ಮಾರ್ಗಸೂಚಿಗಳನ್ನು ಗಮನದಲ್ಲಿರಿಸಿಕೊಂಡು ಸೂಕ್ತವಾದ ಕರಡು ಸಮಗ್ರ ಶಾಸನವನ್ನು ಈ ಆದೇಶದ ದಿನಾಂಕದಿಂದ 15 ದಿನಗಳ ಅವಧಿಯಲ್ಲಿ ತಯಾರಿಸಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ರವರು ಈ ಸಮಿತಿಯ ಕಾರ್ಯನಿರ್ವಹಣೆಗೆ ಅಗತ್ಯವಾದ ಎಲ್ಲಾ ನೆರವು ಮತ್ತು ವ್ಯವಸ್ಥೆಗಳನ್ನು ಕಲ್ಪಿಸತಕ್ಕದ್ದು. ಸಮಿತಿಯ ಮಾನ್ಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ನಿಯಮಾನುಸಾರ ಲಭ್ಯವಾಗುವ ಸಭಾ ಭತ್ಯೆ/ಗೌರವ ಧನ, ಸಾರಿಗೆ ಭತ್ಯೆ ಮತ್ತಿತರ ಭತ್ಯೆಗಳನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ವತಿಯಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಮನೋಹರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1743 ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಸಂಪೂರ್ಣ ಸ್ವಚ್ಚತಾ ಆಂದೋಲನದಡಿ ಪ್ರಸ್ತಾಪಿಸಿರುವ ಶೌಚಾಲಯ ನಿರ್ಮಾಣದ ಕಾಮಗಾರಿಯನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೊಂದಿಗೆ ಒಗ್ಗೂಡಿಸಿ ಅನುಷ್ಠಾನಗೊಳಿಸಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**

1. ನಿರ್ದೇಶಕರು, ರಾಜ್ಯ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಸಂಪೂರ್ಣ ಸ್ವಚ್ಚತಾ ಆಂದೋಲನ ಇವರ ಪತ್ರದ ಸಂಖ್ಯೆ ಗ್ರಾಅಪ/ಕನೀಸಂ/ಸಂ.ಸ್ವಆಂ/62/10–11, ದಿನಾಂಕ 18–02–2011.
2. ನಿರ್ದೇಶಕರು, ಎಂಜಿಎನ್‌ಆರ್‌ಇಜಿಎಸ್ ಇವರ ಅನಧಿಕೃತ ಟಿಪ್ಪಣಿ ಪತ್ರದ ಸಂ: ಗ್ರಾಅಪ 44, ಉಖಾಯೋ 2006, ದಿನಾಂಕ 04–05–2011.
3. ನಿರ್ದೇಶಕರು, ಎಂಜಿಎನ್‌ಆರ್‌ಇಜಿಎಸ್ ಇವರ ಪತ್ರದ ಸಂಖ್ಯೆ ಗ್ರಾಅಪ 153 ಉಖಾಯೋ 2011, ದಿನಾಂಕ 15–06–2011.
4. ನಿರ್ದೇಶಕರು, ರಾಜ್ಯ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಸಂಪೂರ್ಣ ಸ್ವಚ್ಚತಾ ಆಂದೋಲನ ಇವರು ದಿನಾಂಕ 24–06–2011 ರಂದು ಕಡತದಲ್ಲಿ ಅಂದಾಜು ಪತ್ರಿಕೆ ಹಾಗೂ ನಕ್ಷೆಯೊಂದಿಗೆ ಅಭಿಪ್ರಾಯ ನೀಡಿ ಸಲ್ಲಿಸಿರುತ್ತಾರೆ.

**ಪ್ರಸ್ತಾವನೆ :**

ಗ್ರಾಮೀಣ ಪ್ರದೇಶಗಳಲ್ಲಿ ಬಯಲು ಮಲ ವಿಸರ್ಜನೆ, ಸಂಪೂರ್ಣವಾಗಿ ನಿಲ್ಲಿಸಲು ಶೌಚಾಲಯ ನಿರ್ಮಾಣಕ್ಕಾಗಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 30 ಮಾನವ ದಿನಗಳ ಕೂಲಿ ವೆಚ್ಚವನ್ನು ಸಂಯೋಜನೆಯ (Convergence) ಮೂಲಕ ಭರಿಸಲು ನಿರ್ದೇಶಕರು, ರಾಜ್ಯ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಸಂಪೂರ್ಣ ಸ್ವಚ್ಚತಾ ಆಂದೋಲನ ಇವರು ಉಲ್ಲೇಖ (1)ರಲ್ಲಿ ಅಂದಾಜು ಪತ್ರಿಕೆಯೊಂದಿಗೆ ಸಲ್ಲಿಸಿದ್ದು, ಕೆಲವು ಕಾರಣಗಳಿಂದ ಸದರಿ ಕಾಮಗಾರಿಯ ನಿರ್ಮಾಣಕ್ಕೆ ಹೊರಡಿಸಿರುವ ಆದೇಶವನ್ನು ಉಲ್ಲೇಖ (2)ರಲ್ಲಿ ಹಿಂಪಡೆಯಲು ಸೂಚಿಸಲಾಗಿತ್ತು. ತದನಂತರ ಸೂಕ್ತವಾದ ಪ್ರಸ್ತಾವನೆಯನ್ನು ಅಂದಾಜು ಪತ್ರಿಕೆ ಹಾಗೂ ನಕ್ಷೆಯೊಂದಿಗೆ ಸಲ್ಲಿಸುವಂತೆ ನಿರ್ದೇಶಕರು, ರಾಜ್ಯ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು ಇವರನ್ನು ಉಲ್ಲೇಖ (3)ರಲ್ಲಿ ಕೋರಲಾಗಿದ್ದು ಅದರಂತೆಯೇ ಉಲ್ಲೇಖ (4)ರಲ್ಲಿ ಕಡತದೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶೌಚಾಲಯ ನಿರ್ಮಾಣ ಮಾಡಲು ಸಡಿಲು ಮಣ್ಣಿನಲ್ಲಿ 19 ಮಾನವ ದಿನಗಳಿಗೆ ಮತ್ತು ಗಟ್ಟಿ ಮಣ್ಣಿನಲ್ಲಿ 21 ಮಾನವ ದಿನಗಳಿಗೆ ಕೂಲಿ ವೆಚ್ಚವನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಗ್ಗೂಡಿಕೆಯ ಮೂಲಕ ಅನುಷ್ಠಾನಗೊಳಿಸಬಹುದೆಂದು ಅಭಿಪ್ರಾಯವನ್ನು ನೀಡಿರುತ್ತಾರೆ. ಆದ್ದರಿಂದ ಸದರಿ ಅಂದಾಜು ಪತ್ರಿಕೆಯನ್ನು ಅಂಗೀಕರಿಸಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಅನುಷ್ಠಾನವಾಗುತ್ತಿರುವ ಸಂಪೂರ್ಣ ಸ್ವಚ್ಚತಾ ಆಂದೋಲನದಡಿ ಹಾಗೂ ಇತರೆ ಎಲ್ಲಾ ಯೋಜನೆಗಳಲ್ಲಿ ಪ್ರಸ್ತಾಪಿಸಿರುವ/ಪ್ರಸ್ತಾಪಿಸುವ ಶೌಚಾಲಯ ಕಾಮಗಾರಿಯ ನಿರ್ಮಾಣವನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೊಂದಿಗೆ ಒಗ್ಗೂಡಿಸಿ ಅನುಷ್ಠಾನಗೊಳಿಸಬಹುದೆಂದು ಸರ್ಕಾರವು ತೀರ್ಮಾನಿಸಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 44 ಉಖಾಯೋ 2006, ಬೆಂಗಳೂರು, ದಿನಾಂಕ : 25–06–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿ ಅನುಷ್ಠಾನವಾಗುತ್ತಿರುವ ಸಂಪೂರ್ಣ ಸ್ವಚ್ಚತಾ ಆಂದೋಲನದಡಿ ಹಾಗೂ ಇತರೆ ಎಲ್ಲಾ ಯೋಜನೆಗಳಲ್ಲಿ ಪ್ರಸ್ತಾಪಿಸಿರುವ/ಪ್ರಸ್ತಾಪಿಸುವ ವೈಯಕ್ತಿಕ ಶೌಚಾಲಯದ ಕಾಮಗಾರಿ ನಿರ್ಮಾಣವನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೊಂದಿಗೆ ಒಗ್ಗೂಡಿಸಿ ಈ ಆದೇಶದೊಂದಿಗೆ ಲಗತ್ತಿಸಿರುವ ಅಂದಾಜು ಪತ್ರಿಕೆ ಹಾಗೂ ನಕ್ಷೆಯಂತೆ ಅಂದಾಜು ಪತ್ರಿಕೆಯಲ್ಲಿ ಸೂಚಿಸಿರುವ ಸಡಿಲು ಮಣ್ಣಿನಲ್ಲಿ 19 ಅಕುಶಲ ಮಾನವ ದಿನಗಳ ಕೂಲಿ ವೆಚ್ಚವನ್ನು ಮತ್ತು ಗಟ್ಟಿ ಮಣ್ಣಿನಲ್ಲಿ 21 ಅಕುಶಲ ಮಾನವ ದಿನಗಳ ವೆಚ್ಚವನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅನುದಾನದಲ್ಲಿ ಭರಿಸುವ, ಸಾಮಗ್ರಿ

ವೆಚ್ಚವನ್ನು ಆಯಾ ಇತರೆ ಯೋಜನೆಗಳಲ್ಲಿ ಭರಿಸುವ ಮತ್ತು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಇತರೆ ಎಲ್ಲಾ ಯೋಜನೆಗಳಲ್ಲಿ ಪ್ರಸ್ತಾಪಿಸುವ ಶೌಚಾಲಯದ ನಿರ್ಮಾಣದ ಕಾಮಗಾರಿಯ ಮೊತ್ತ ಅಂದಾಜು ಪಟ್ಟಿಯ ಮೊತ್ತಕ್ಕೆ ಮೀರದಂತೆ ಕ್ರಮವಹಿಸತಕ್ಕದ್ದು.
2. ಒಂದು ವೇಳೆ ಕಾಮಗಾರಿಗೆ ಆದ ಖರ್ಚು ಅಂದಾಜು ಪತ್ರಿಕೆಗಿಂತ ಕಡಿಮೆಯಾದಲ್ಲಿ ಅದಕ್ಕೆ ಸೀಮಿತಗೊಳಿಸತಕ್ಕದ್ದು.
3. ಕಾಮಗಾರಿಯನ್ನು ಕೇವಲ ನೋಂದಾಯಿತ ಕಾರ್ಮಿಕರಿಂದ ನಿರ್ವಹಿಸತಕ್ಕದ್ದು
4. ಗುತ್ತಿಗೆದಾರರನ್ನು ಮತ್ತು ಯಂತ್ರಗಳನ್ನು ಅನುಷ್ಠಾನದಲ್ಲಿ ಬಳಸಲು ನಿಷೇಧಿಸಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಶಿವಶಂಕರ್**

ನಿರ್ದೇಶಕರು

ಮಹಾತ್ಮಗಾಂಧಿ ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## DETAILED ESTIMATE

Name of Work : Sample Detailed Estimate for Construction of Toilet & Soak pit

Head of A/c : Under MGNRGA for the Year 2010-11 based on Dharwad circle PWD SR 2010-2011

| Sl. No. | Item of work | Measurements | | | | Quantity | Unity | Rate | Amount |
|---|---|---|---|---|---|---|---|---|---|
| | | No | L | B | D | | | | |
| 1 | 2 | 3 | 4 | 5 | 6 | 7 | 8 | 9 | 10 |

1. KSRB 2-2.1: Earthwork excavation for foundation of buildings, culverts, water supply, sanitary lines and electrical conduits either in pit or in trenches 1.5 m and above in width, in ordinary soil not exceeding 1.5 m in depth including dressing the bottom and sides of pits and trenches, stacking the excavated soil clear from edges of excavation with lead upto 50 m. after breaking of colds complete as per specifications, specification No. KBS 2.1 (a)/2,3,5, (P.No. 5,I No. 2,3 PWDSR10-11)

**<u>In case of ordinary soil</u>**

Toilet C/L 4 1.35 0.45 0.60 1.46 Cmtr

Soak Pit 1.20 m dia and 1.50 depth

0.785 1.20 1.20 1.50 1.70 Cmtr

3.16 Cmtr 118.00 373.00

**<u>In case of Hard soil</u>** (P. No. 5, I No. 2.4 PWDSR10-11)

Toilet C/L 4 1.35 0.45 0.60 1.46 Cmtr

Soak Pit 1.20 m dia and 1.50 depths

0.785 1.20 1.20 1.50 1.70 Cmtr

3.16 Cmtr 178.00 563.00

2. KSRB 5-1.1 Providing and construction granite/trap/basalt rubble stone masonry in foundation with CM 1:8 mortar (uncoursed) bond stones at two m. apart in each course including cost of materials, labour, curing complete as per specifications (P.No. 22, I No. 5.2 PWDSR 10-11)

4 1.35 0.45 0.60 1.46 Cmtr 1980.00 2890.00

3. KSRB 5-1.1 providing and laying granite/trap/basalt cement concrete with including cost of materials, labour, curing etc complete as per specifications. (P. No. 12, I No. 4.7 PWDSR 10-11) CC 1;3;6 20 mm

1 1.45 1.45 0.075 0.16 cum 3897.00 624.00

4. KSRB 5-13: Providing and constructing non-load bearing wall cement concrete cavities blocks (hollow blocks) of proportion 1:5:3 blocks of size 40 x10x20 cms (lxbxh) strength not less than 35 kg. per sqm with cement mortar 1:4 conforming to I.S. 2185 of 1967 having not less than 40 mm shell thickness 50% of total volume of block having two large cavities with 20 mm. Wall thickness in between including cost of materials, labour charges, scaffolding, curing complete as per specifications (P.No. 23, I No. 5.26 PWDSR 10-11)

Deductions 4 1.00 1.80 7.20 Smtr

Door 1 0.60 1.80 1.08 Smtr

Ventilator 1 0.30 0.20 0.06 Smtr

1.14 Smtr

Net Qty 7.20-1.14 6.06 Smtr 367.00 2224.00

5. KSRB 11-3: Providing and fixing white vitreous china clay, water Indian type (squatting pan) of size 580 mm with footrests, 100 mm S or P trap, (approved make) cutting and making good the wall and floor wherever required, including cost of materials, labour complete as per specifications. (P. No. 67, I No. 12.3 PWDSR10-11)

1 - - 1.00 Pan 903.00 903.00

6. Soak Pit dry wall for soakage lining dia 0.35 wide (W.S.)

3.14x1.50 -.30 1.50 2.11 Cum 700.00 1477.00

7. KSRB 12-11: Providing and laying in position to required level or slope 100 mm internal diameter slat glazed stoneware pipes grade A and jointing with stiff mixture of cement mortar in proportion of 1:1 testing of pipes and joints, including cost of materials, labour charges complete as per specifications (P. No. 60, I No. 11.1 PWD SR 10-11)

1 2.40 - 2.40 M 197.00 473.00

8. Burnt Stone Slabs 10 Cms thick (P. No. XV, I No. 412 PWDSR 10-11)

1 1.50 1.50 2.25 Smtr 290.00 653.00

9. KSRB 8.3-1: Providing and laying to required line and slope roofing with corrugated asbestos cement sheet 6 mm. Thick fixed with galvanized iron J or L hooks, bolts and nuts 8 mm Dia C.I plain and bitumen washers over the existing parings, rafters and trusses including cost of materials, labour, complete as per specifications. Specification No. KBS 8.5 (P. No. 41, I No. 8.3 PWDSR10-11)

1 1.50 1.50 2.25 Smtr 294.00 662.00

10. SOLID PANEL PVC DOOR SHUTTER Providing & fixing 30 mm thick factory made rigid foam Paneled door Shutters made from M.S. tube of 19 gauge thickness, size 19x19mm for styles and 15x15mm for top & bottom rails, covered with heat moulded PVC channel of 5 mm thick sheet & 30x50 mm wide to form styles & 5 mm thick & 75 mm wide PVC sheets for top rail, lock rail & bottom rail on either side & 5 mm thick 20 mm wide PVC sheet as gap insert for top rail & bottom rail, Panelling of 5 mm thick PVC sheet fitted in the M.S. Frame, Sealed to the styles & rails with 5.x30 mm PVC sheet beading on either side & joined together with solvent cement adhesive etc., Complete as per manufacturers specification & direction of Engineer-in-charge fixed to frames with 3 no's of 75 mm Aluminium hings. (P.No. 52, It. No. 9.83 PWD SR 10-11)

1 1.60 1.50 - 0.90 Smtr 1,550.00 1,395.00

11. SOLID PVC DOOR FRAME Providing & fixing factory made PVC Doorframe of size 50x47 mm with a wall thickness of 5 mm, made out of extruded 5 mm rigid PVC foam sheet metered cut at corners & Jointed 2 No's of 150 mm long brackets of 15x15mm M.S. square tube, the entire door frame to be reinforced with 19x19mm M.S.square tube of 19 gauge. The doorframe to be fixed to the wall using M.S. Screws of 65/80mm size complete as per manufacturers specifications & Direction of Engineer-incharge. (P.No. 52, It. No. 9.84 PWD SR 10-11)

Qty. vide I No. 10 0.90 Smtr 205.00 185.00

**In case of ordinary soil**
Total Amount Rs. 11859.00
**In case of Hard soil**
Total Amount Rs. 12049.00

**R. P. Kulkarni**
Additional Director (Tech.) & Chief Engineer
Karnataka Rural Water Supply & Sanitation Agency
2nd Floor, 'E' Block, KHB complex,
Cauvery Bhavan, K. G. Road, Bangalore-9.

**Sample Estimate for construction of rural toilet with soak pit for approximate assessment of requirement of unskilled labour for payment under MGNREGS (As per)**

| Sl No. | Item | Unit | Quantity | SR/MR rate | Amount | Material Approximate Amount | Labour component | | | | | | | | Remarks |
|---|---|---|---|---|---|---|---|---|---|---|---|---|---|---|---|
| | | | | | | | Skilled/semi | | Unskilled | | | | | | |
| | | | | | | | | | Ordinary soil | | | Hard soil | | | |
| | | | | | | | Description | Approximate Amount | No's | Rate | Amount | No's | Rate | Amount | |
| 1 | KSRB 2-2.1: Earthwork excavation for foundation of buildings, culverts, water supply, sanitary lines and electrical conduits either in pits or in trenches | | | | | | | | | | | | | | Fractional vaules of |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | 1.5m and above in width, in ordinary soil not exceeding 1.5m in depth including dressing the bottom and sides of pits and trenches, stacking the excavated soil clear from edges of excavation with lead upto 50m. after breaking of colds complete as per specifications, specification No. KBS 2.1 (a)/2.3.5. (P.No. 5, I No. 2.3 PWDSR10-11) | | | | | | | | | | | | | | mandays are rounded to next integer digi |
| | In case of ordinary soil | Cum | 3.16 | 118 | 372.88 | 0 | | 0 | 3 | 125 | 375 | 5 | 125 | 625 | |
| | In case of Hard soil | Cum | 3.16 | 178 | 562.48 | | | | | | | | | | |
| 2 | KSRB 5-1.1: Providing and constructing granite/trap/basalt rubble stone masonry in foundation with CM 1,8 mortar (uncoursed), bond stones at two m.apart in each course including cost of materials, labour, curing complete as per specifications (P. No. 22, I No. 5.2 PWDSR10-11) | | | | | | | | | | | | | | |
| | | Cum | 1.46 | ### | 2890.80 | 2265.81 | 1 masons | 250 | 3 | 125 | 375 | 3 | 125 | 375 | |
| 3 | KSRB 5-1.1: Providing and laying granite/trap/basalt cement concrete with including cost of materials, labour, curing etc., complete as per specifications (P. No. 12, 1 No. 4.7 PWDSR 10-11) CC 1;3;6.20 mm | | | | | | | | | | | | | | |
| | | Cum | 0.16 | ### | 623.52 | 248.52 | ½ masons | 125 | 2 | 125 | 250 | 2 | 125 | 250 | |
| 4 | 4.KSRB 5-13: Providing and onstructing non-load bearing wall cement concrete cavities blocks (hollow blocks) of proportion 1:5:3 blocks of size 40x10x20 cms (Ixbxh) strength not less than 35 kg. per sqm with cement mortar 1:4 conforming to I.S. 2185 of 1967 having not less than 40 mm shell thickness 50% of total volume of block having two large cavities with 20mm, Wall thickness in between including cost of materials, labour charges, scaffolding, curing complete as per specifications (P. No. 23, I No. 5.26 PWDSR10-11) | | | | | | | | | | | | | | |
| | | Sqmtr | 6.06 | 367 | 2,224.02 | 1224.02 | 2 masons | 500 | 4 | 125 | 500 | 4 | 125 | 500 | - |
| 5 | 5. KSRB 11-3: Providing and fixing white vitreous china clay, water Indian type (squatting pan of size 580 mm with footrests, 100 mm S or P trap (approved make) cutting and making good the wall and floor wherever required, including cost of materials, labour complete as per specifications (P. No. 67, I No. 12.3 PWDSR10-11) | | | | | | | | | | | | | | |
| | | Each No. | 1 | 903 | 903.00 | 903 | Plum ber | | 0 | 125 | 0 | 0 | 125 | 0 | |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| 6 | 6.Soak Pit dry wall for soakage lining dia 0.35 wide(LS) | | | | | | | | | | | | | | |
| | | Sqmtr | 2.11 | 700 | 1,477.02 | 727 | | | 6 | 125 | 750 | 6 | 125 | 750 | - |
| 7 | 7. KSRB 12-11: Providing and laying in position to required level or slope 100 mm internal diameter salt glazed stoneware pipes grade A and jointing with stiff mixture of cement mortar in proportion of 1:1, testing of pipes and joints. Including cost of materials, labour charges complete as per specifications. (P. No. 60, I No. 11.1 PWD SR 10-11). | | | | | | | | | | | | | | |
| | | rmt | 2.4 | 197 | 472.80 | 222.8 | Plum ber | 250 | 0 | 125 | 0 | 0 | 125 | 0 | |
| 8 | 8. Burnt Stone Slabs 10 Cms thick (P. No. XV, I No. 412 PWDSR 10-11 | | | | | | | | | | | | | | |
| | | Sqmtr | 2.25 | 290 | 652.50 | 652.5 | | | 0 | 125 | 0 | 0 | 125 | 0 | |
| 9 | 9. KSRB 8.3-1: Providing and laying to required line and slope roofing with corrugated asbestos cement sheet 6 mm. Thick fixed with galvanized iron J or L hooks, bolts and nuts 8 mm, Dia C.I plain and bitumen washers over the existing purilns, rafters and trusses including cost of materials, labour, complete as per specifications. Specification No. KBS 8. 5 (P. No. 41, I No. 8.3 PWDSR10-11) | | | | | | | | | | | | | | |
| | | Sqmtr | 2.25 | 294 | 661.50 | 536.5 | | | 1 | 125 | 125 | 1 | 125 | 125 | |
| 10 | 10. SOLID PANEL PVC DOOR SHUTTER Providing & fixing 30 mm thick factory made rigid foam Panelled door Shutters made from M.S. tube of 19 gauge thickness, size 19x19 mm for styles and 15x15 mm for top & bottom rails, covered with heat moulded PVC channel of 5 mm thick sheet & 30x50 mm wide to form styles & 5 mm thick & 75 mm wide PVC sheets for top rail, lock rail & bottom rail on either side & 5 mm thick 20 mm wide PVC sheet as gap insert for top tail & bottom rail, Panelling of 5 mm thick PVC sheet fitted | | | | | | | | | | | | | | |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | in the M.S. Frame, Sealed to the styles & rails with 5x30 mm PVC sheet beading on either side & joined together with solvent cement adhesive etc., Complete as per manufactures specification & direction of Engineer-in-charge fixed to frames with 3 no.s of 75 mm. Aluminium hings. (P. No. 52, it. NO. 9.83 PWD SR 10-11) | | | | | | | | | | | | | | |
| | | Sqmtr | 0.9 | ### | 1,395.00 | 1395 | | | 0 | 125 | 0 | 0 | 125 | 0 | |
| 11 | 11. SOLID PVC DOOR FRAME Providing & fixing factory made PVC Doorframe of size 50x47 mm with a wall thickness of 5 mm, made out of extruded 5 mm rigid PVC foam sheet metered out at corners & Jointed 2 NO.s of 150 mm long brackets of 15x15 mm M. S. square tube, the entire door frame to be reinforced with 19x19 mm M. S. square tube of 19 gauge. The doorframe to be fixed to the wall using M. S. Screws of 65/80 mm size domplete as per manufacturers specifications & Direction of Engineer-incharge (P. NO. 52, it. No. 9.84 PWD SR 10-11) | | | | | | | | | | | | | | |
| | | Sqmtr | 0.9 | 205 | 184.50 | 184.5 | | | 0 | 125 | 0 | 0 | 125 | 0 | |
| | In case of ordinary soil Total Amount Rs. 11859.00 | | | | Total 8359.64 | | 1125 | 19 | | 2375 | 21 | | 2625 | | |
| | In case of Hard soil Total Amout Rs. 12049.00 | | | | | | | | Man days | | | Man days | | | |
| | *Hence if toilet as per above drawing and specifications in* ***<u>Ordinary soil</u>*** *19 (ninteen) unskilled can be paid under MGNREGS Material skilled and semi skilled workers payment to be paid under convergence with other schemes. These calculations are for guidelines only actual calculations may be taken up case wise* | | | | | | | | | | | | | | |
| | *Hence if toilet as per above drawing and specifications in* ***<u>Hard soil</u>*** *21 (twenty one) unskilled can be paid under MGNREGS Material skilled and semi skilled workers payment to be paid under convergence with other schemes. These calculations are for guidelines only actual calculations may be taken up case wise* | | | | | | | | | | | | | | |

# ESTIMATE FOR RURAL SANITATION




***Note:*** All dimensions in meters

R. P. KULKARNI
Additional Director (Tech.) & Chief Engineer
Karnataka Rural Water Supply & Sanitation Agency
2nd Floor, 'E' Block, KHB Complex,
Cauvery Bhavan, K. G. Road, Bangalore-9

**ಪಿ. ಶಿವಶಂಕರ್**
ನಿರ್ದೇಶಕರು
ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ. ಆರ್. 1744

## ಒಳಾಡಳಿತ ಸಚಿವಾಲಯ
## ಸುತ್ತೋಲೆ

**ಸಂಖ್ಯೆ : ಒಇ 61 ಸಿಡಬ್ಲ್ಯೂಪಿ 2008, ಬೆಂಗಳೂರು, ದಿನಾಂಕ : 7-6-2011**

**ವಿಷಯ :** ಭಾರತೀಯ ರಿಸರ್ವ್ ಬ್ಯಾಂಕ್‌ನ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಸೂಚನೆಯನ್ವಯ ಬ್ಯಾಂಕುಗಳಲ್ಲಿನ ಹಣಕಾಸು ವ್ಯವಹಾರ ನಿರ್ವಹಣೆ ಸಂಸ್ಥೆಗಳನ್ನು ನಿಯಂತ್ರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಎಇ 27 ಟಿಎಆರ್ 2007, ದಿನಾಂಕ : 12-12-2007.

2. ಭಾರತೀಯ ರಿಸರ್ವ್ ಬ್ಯಾಂಕ್‌ನಲ್ಲಿ ದಿನಾಂಕ : 24-5-2011 ರಂದು ನಡೆದ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಸಭೆ.

ಭಾರತೀಯ ರಿಸರ್ವ್ ಬ್ಯಾಂಕ್ ಅಡಿಯಲ್ಲಿ ರಾಜ್ಯ ಮಟ್ಟದ ಸಮನ್ವಯ ಸಮಿತಿಯು ಬ್ಯಾಂಕ್‌ಗಳಲ್ಲದ ಹಣಕಾಸು ನಿರ್ವಹಣಾ ಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ನಿಯಂತ್ರಿಸುವ ಉದ್ದೇಶದಿಂದ ಕರ್ತವ್ಯ ನಿರತವಾಗಿದ್ದು, ಇಂತಹ ಸಂಸ್ಥೆಗಳು ಸಾರ್ವಜನಿಕರಿಂದ ಠೇವಣಿ ಸಂಗ್ರಹಿಸುವುದನ್ನು ನಿಯಂತ್ರಣಕ್ಕೊಳಪಡಿಸುವುದಕ್ಕಾಗಿ ಕಾಲಕಾಲಕ್ಕೆ ರಾಜ್ಯ ಸರ್ಕಾರದೊಂದಿಗೆ ಸಮಲೋಚನೆ ನಡೆಸುತ್ತಿದೆ ಇಂತಹ ಸಂಸ್ಥೆಗಳು ಸಾರ್ವಜನಿಕರಿಂದ ಠೇವಣಿ ಸಂಗ್ರಹಣೆಗಳನ್ನು ನಿಯಂತ್ರಿಸಿ ಸಾರ್ವಜನಿಕರಿಗೆ ಮೋಸ ಮಾಡುವುದನ್ನು ತಡೆಗಟ್ಟಲು ಹಲವಾರು ಕ್ರಮ ಕೈಗೊಂಡಿದ್ದಾಗ್ಯೂ ನಿಯಂತ್ರಣ ಮೀರಿ ಹಲವಾರು ಸಂಸ್ಥೆಗಳು ಸಾರ್ವಜನಿಕರಿಗೆ ಮೋಸ ಮಾಡುತ್ತಿರುವುದನ್ನು ರಾಜ್ಯ ಸರ್ಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕ್ ಗಮನಿಸಿವೆ. ಸಾರ್ವಜನಿಕರಿಂದ ಠೇವಣಿ ಸಂಗ್ರಹಣೆ ವಿಷಯದಲ್ಲಿ ನಿಯಂತ್ರಣಕ್ಕಾಗಿ ಕರ್ನಾಟಕ ಸರ್ಕಾರವು Karnataka Depositors Investment Protection Act 2004 (Karnataka Act of 2005) ಜಾರಿಗೆ ತಂದಿರುತ್ತದೆ.

ಮೋಸಕ್ಕೊಳಗಾದ ಠೇವಣಿದಾರರು ದೂರು ದಾಖಲಿಸುವ ಬಗ್ಗೆ ಮತ್ತು ಅಂತಹ ದೂರುಗಳನ್ನು ನಿರ್ವಹಿಸುವ ಬಗ್ಗೆ ಆರ್ಥಿಕ ಅಪರಾಧ ವಿಶ್ಲೇಷಣೆ ಅಡಿಯಲ್ಲಿ ಪೊಲೀಸ್ ಇಲಾಖೆಯು ಎದುರಿಸುತ್ತಿರುವ ಸಮಸ್ಯೆಗಳನ್ನು ಗಮನಿಸಿದ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಆರ್ಥಿಕ ಅಪರಾಧಗಳ ದೂರುಗಳನ್ನು ನಿರ್ವಹಿಸುವ ತನಿಖಾಧಿಕಾರಿಗಳಿಗೆ ವಿಶೇಷ ಅಧಿಕಾರಿ ನೀಡುವ ಬಗ್ಗೆ ರಾಜ್ಯ ಮಟ್ಟದ ಸಮನ್ವಯ ಸಮಿತಿಯಲ್ಲಿ ಪದೇ ಪದೇ ಜ್ಞಾಪಿಸುತ್ತಾ ಬಂದಿದೆ.

ಈ ಹಿನ್ನೆಲೆಯಲ್ಲಿ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಲಾಗಿದೆ ಮತ್ತು Karnataka Depositors Investment Protection Act 2004 ಅಡಿಯಲ್ಲಿ ಅಮಾಯಕ ಠೇವಣಿದಾರರ ಹಿತರಕ್ಷಣೆಗಾಗಿ ಎಲ್ಲಾ ಉಪ ವಿಭಾಗಾಧಿಕಾರಿಗಳು ಹಾಗೂ ಉಪ ವಿಭಾಗೀಯ ದಂಡಾಧಿಕಾರಿಗಳನ್ನು (ಬೆಂಗಳೂರು ನಗರ ಜಿಲ್ಲೆ ಹೊರತುಪಡಿಸಿ) ಸಕ್ಷಮ ಪ್ರಾಧಿಕಾರಿಗಳೆಂದು ನೇಮಕ ಮಾಡಿರುವುದನ್ನೂ ಭಾರತೀಯ ರಿಸರ್ವ್ ಬ್ಯಾಂಕ್‌ನ ಗಮನಕ್ಕೆ ತರಲಾಗಿದೆ.

Karnataka Depositors Investment Protection Act 2004 ರನ್ವಯ ಬೆಂಗಳೂರು ನಗರ ಜಿಲ್ಲೆ ಹೊರತು ಪಡಿಸಿ ರಾಜ್ಯದ ಎಲ್ಲಾ ಉಪ ವಿಭಾಗಾಧಿಕಾರಿಗಳು ಹಾಗೂ ಉಪ ವಿಭಾಗೀಯ ದಂಡಾಧಿಕಾರಿಗಳು ಅವರವರ ಕ್ಷೇತ್ರ ವ್ಯಾಪ್ತಿಯಲ್ಲಿ ಕಾಯ್ದೆಯ ಕಲಂ 5 ಉಪ ಕಲಂ 1 ರಡಿಯಲ್ಲಿ ಠೇವಣಿದಾರರು ತಮಗೆ ಮೋಸವಾದ ಬಗ್ಗೆ ಮನವಿ ಮಾಡಿದ್ದಲ್ಲಿ ಅಂತಹ ಠೇವಣಿದಾರರ ಹಿತರಕ್ಷಣೆಗಾಗಿ ಕಾಯ್ದೆಗನುಸಾರವಾಗಿ ಕ್ರಮ ಕೈಗೊಳ್ಳಲು ಅಧಿಕಾರ ಹೊಂದಿರುತ್ತಾರೆ. ಈ ಬಗ್ಗೆ ಆರ್ಥಿಕ ಇಲಾಖೆಯು ಹೊರಡಿಸಿರುವ ಅಧಿಸೂಚನೆ ಸಂಖ್ಯೆ : ಎಫ್‌ಡಿ 27 ಟಿಎಆರ್ 2007 ದಿನಾಂಕ : 12-12-2007 ರ ಪ್ರತಿಯೊಂದನ್ನು ಮಾಹಿತಿಗಾಗಿ ಈ ಸುತ್ತೋಲೆಯೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ. ಇಂತಹ ಪ್ರಸಂಗಗಳಲ್ಲಿ ಠೇವಣಿದಾರರ ಹಿತರಕ್ಷಣೆಯ ಜವಾಬ್ದಾರಿ ಸಂಬಂಧಿಸಿದ ಉಪ ವಿಭಾಗಾಧಿಕಾರಿಗಳು ಹಾಗೂ ಉಪ ವಿಭಾಗೀಯ ದಂಡಾಧಿಕಾರಿಗಳದ್ದಾಗಿರುತ್ತದೆ ಎಂದು ಈ ಮೂಲಕ ಪುನರುಚ್ಚರಿಸಲಾಗಿದೆ. ಯಾವುದೇ ಠೇವಣಿದಾರರಿಗೆ ಮನವಿಯ ನಂತರವೂ ಹಿತರಕ್ಷಣೆಗೆ ಕ್ರಮ ಜಾರಿಯಾಗದಿರುವ ಪ್ರಕರಣಗಳು ಕಂಡು ಬಂದಲ್ಲಿ ಇಂತಹ ಪ್ರಕರಣಗಳಲ್ಲಿ ಸಂಬಂಧಿಸಿದ ಸಕ್ಷಮ ಪ್ರಾಧಿಕಾರಿಗಳನ್ನು ಜವಾಬ್ದಾರರಾಗಿ ಪರಿಗಣಿಸಲಾಗುವುದು.

**ರಾಘವೇಂದ್ರ ಹೆಚ್. ಔರಾದ್‌ಕರ್**
ಸರ್ಕಾರದ ಕಾರ್ಯದರ್ಶಿ (ಸೆ.ಅ. & ಸ.ಸೇ)
ಒಳಾಡಳಿತ ಇಲಾಖೆ.

ಪಿ.ಆರ್. ನಂ. 1745

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ನೀಡುವ ವಾರ್ಷಿಕ ವಿದ್ಯಾರ್ಥಿ ವೇತನ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಎಲ್ 55 ಎಸ್‌ಇಡಬ್ಲ್ಯೂ 1978, ದಿನಾಂಕ : 10-10-1983.

2) ಸರ್ಕಾರಿ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಎಲ್ 332 ಎಸ್‌ಇಡಬ್ಲ್ಯೂ 1991, ದಿನಾಂಕ : 12-1-1993.

3) ಸರ್ಕಾರಿ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಡಿ 445 ಪಕವಿ 1997, ದಿನಾಂಕ : 7-10-1997.

4) ಸರ್ಕಾರಿ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಡಿ 313 ಪಕವಿ 2002, ದಿನಾಂಕ : 2-7-2002.

5) ಸರ್ಕಾರಿ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಡಿ 409 ಪಕವಿ 2003, ದಿನಾಂಕ : 8-1-2004.

ಪ್ರಸ್ತಾವನೆ :

2011-12ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 116 ಈ ಕೆಳಗಿನಂತಿದೆ :-

"ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದ ಒಂದರಿಂದ ಏಳನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಾರ್ಷಿಕ ವಿದ್ಯಾರ್ಥಿ ವೇತನವನ್ನು 75 ರೂ. ಗಳಿಂದ 250 ರೂ.ಗಳಿಗೆ ಹೆಚ್ಚಿಸಲಾಗುವುದು ಮತ್ತು 8 ರಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ 100 ರೂ. ಗಳಿಂದ 500 ರೂ.ಗಳಿಗೆ ಹೆಚ್ಚಿಸಲಾಗುವುದು. ಈ ಕಾರ್ಯಕ್ರಮದಡಿ ಸುಮಾರು 25 ಲಕ್ಷ ವಿದ್ಯಾರ್ಥಿಗಳು ಪ್ರಯೋಜನ ಪಡೆಯಲಿದ್ದಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 122 ಸಮನ್ವಯ 2011, ಬೆಂಗಳೂರು, ದಿನಾಂಕ : 7-7-2011.**

ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಮೇಲೆ (1) ರಿಂದ (4) ರಲ್ಲಿ ಓದಲಾದ ಆದೇಶಗಳಂತೆ ಹಾಲಿ ನೀಡುತ್ತಿರುವ ವಾರ್ಷಿಕ ವಿದ್ಯಾರ್ಥಿ ವೇತನ ದರಗಳನ್ನು ಈ ಕೆಳಗಿನಂತೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ :-

| ತರಗತಿ | ಬಾಲಕರು | | ಬಾಲಕಿಯರು | |
|---|---|---|---|---|
| | ಪ್ರಸ್ತುತ ದರ (ರೂ) | ಹೆಚ್ಚಿಸಲಾದ ದರ (ರೂ) | ಪ್ರಸ್ತುತ ದರ (ರೂ) | ಹೆಚ್ಚಿಸಲಾದ ದರ (ರೂ) |
| 1 ರಿಂದ 5 | 75.00 | 250.00 | 75.00 | 250.00 |
| 6 ರಿಂದ 7 | 75.00 | 250.00 | 325.00 | 350.00 |
| 8 ರಿಂದ 10 | 100.00 | 500.00 | 600.00 | 700.00 |

ಈ ಪರಿಷ್ಕೃತ ದರಗಳು ದಿನಾಂಕ : 1-6-2011 ರಿಂದ ಅನ್ವಯವಾಗುವಂತೆ ಜಾರಿಗೆ ಬರುತ್ತವೆ.

1. ವಿದ್ಯಾರ್ಥಿ ವೇತನ ಪಡೆಯಲು ಅರ್ಹತೆ :

1.1 ವಿದ್ಯಾರ್ಥಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.

1.2 ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ-ಕುಟುಂಬದ ವಾರ್ಷಿಕ ಆದಾಯ ಮಿತಿ-ರೂ. 2.00 ಲಕ್ಷ

1.3 ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳಿಗೆ-ಕುಟುಂಬದ ವಾರ್ಷಿಕ ಆದಾಯ ಮಿತಿ-ರೂ. 1.45 ಲಕ್ಷ

1.4 ಈ ಸೌಲಭ್ಯವನ್ನು ಸರ್ಕಾರದ ಹಾಗೂ ಸರ್ಕಾರದ ಮಾನ್ಯತೆ/ಪರವಾನಿಗೆ ಪಡೆದ ಅನುದಾನರಹಿತ ಶಾಲೆಗಳಲ್ಲಿ ಓದುತ್ತಿರುವ ಎಲ್ಲಾ ವಿದ್ಯಾರ್ಥಿಗಳು ಪಡೆಯಬಹುದು.

1.5 ಆದರೆ ಸರ್ಕಾರದ ಹಾಗೂ ಸರ್ಕಾರದ ಅನುದಾನಿತ ವಿದ್ಯಾರ್ಥಿ ನಿಲಯಗಳಲ್ಲಿ/ವಸತಿ ಶಾಲೆಗಳಲ್ಲಿ ಇರುವ ವಿದ್ಯಾರ್ಥಿಗಳು (hostel students) ಪಡೆಯಲು ಅರ್ಹರಿರುವುದಿಲ್ಲ.

2. ವಿದ್ಯಾರ್ಥಿ ವೇತನ ಮಂಜೂರು ಮಾಡುವ ವಿಧಿವಿಧಾನ :

2.1 ವಿದ್ಯಾರ್ಥಿಗಳು ನಿಗದಿತ ಅರ್ಜಿಯನ್ನು (ಅನುಬಂಧ-1) ಶಾಲೆಯ ಮುಖ್ಯೋಪಾಧ್ಯಾಯರಿಗೆ ಸಲ್ಲಿಸಬೇಕು.

2.2 ಅಂತಹ ಅರ್ಜಿ ಜೊತೆಗೆ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಇವುಗಳನ್ನು ಸಂಬಂಧಪಟ್ಟ ತಹಶೀಲ್ದಾರ್‌ರಿಂದ ಪಡೆದು ಅರ್ಜಿಗೆ ಲಗತ್ತಿಸತಕ್ಕದ್ದು.

2.3 ಜಾತಿ ಪ್ರಮಾಣ ಪತ್ರ ಒಂದು ಬಾರಿ ನೀಡಿದಲ್ಲಿ ನಂತರದ ತರಗತಿಗಳಲ್ಲಿ ನೀಡುವ ಅವಶ್ಯಕತೆ ಇರುವುದಿಲ್ಲ.

2.4 ಆದಾಯ ಪ್ರಮಾಣ ಪತ್ರವನ್ನು ಮೂರು ವರ್ಷಕ್ಕೆ ಒಮ್ಮೆ ಹೊಸದಾಗಿ ನೀಡತಕ್ಕದ್ದು.

2.5 ಮುಖ್ಯೋಪಾಧ್ಯಾಯರು ಶಾಲೆಯ ಎಲ್ಲಾ ಅರ್ಜಿಗಳನ್ನು ಸೇರಿಸಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯವರಿಗೆ ನೀಡುವುದು. ಅಂತಹ ಅರ್ಜಿಗಳ ವಿವರಗಳನ್ನು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಗಣಕಯಂತ್ರದಲ್ಲಿ ನಮೂದಿಸತಕ್ಕದ್ದು. ನಂತರ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಅರ್ಜಿಗಳನ್ನು ಪರಿಶೀಲಿಸಿ ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡತಕ್ಕದ್ದು. ಪ್ರತಿ ವರ್ಷ ಅನುಬಂಧ-3ರಲ್ಲಿ ಒಟ್ಟು ಮಂಜೂರು ಮಾಡಿದ ವಿದ್ಯಾರ್ಥಿಗಳ ವಿವರಗಳನ್ನು ನಮೂದಿಸತಕ್ಕದ್ದು. ಅದರ ಪ್ರತಿಯನ್ನು ಸಂಬಂಧಿಸಿದ ಶಾಲೆಯ ಮುಖ್ಯೋಪಾಧ್ಯಾಯರು ಮತ್ತು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಇವರ ಮಾಹಿತಿಗಾಗಿ ಸಲ್ಲಿಸುವುದು.

2.6 ಇದಕ್ಕೆ ಪರಿಶಿಷ್ಟ ಜಾತಿಗಳ ಕಲ್ಯಾಣ ಇಲಾಖೆ ಸೂಕ್ತ ಸಾಫ್ಟ್‌ವೇರ್ ಒದಗಿಸುವುದು.

2.7 ವಿದ್ಯಾರ್ಥಿ ವೇತನದ ಮೊತ್ತವನ್ನು ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಅಥವಾ ಅವರ ತಂದೆ-ತಾಯಿಗಳ ಬ್ಯಾಂಕ್ ಖಾತೆಗೆ ಕಂಪ್ಯೂಟರ್ (EVT-Electronic Transfer) ಮುಖಾಂತರ ಜಮಾ ಮಾಡುವುದು. ಯಾವುದೇ ಕಾರಣಕ್ಕೂ ನಗದು ರೂಪದಲ್ಲಿ ನೀಡಬಾರದು.

3. ವಿದ್ಯಾರ್ಥಿ ವೇತನ ಕ್ಲೇಮ್ ನವೀಕರಿಸುವ ವಿಧಾನ :

3.1 ಮುಖ್ಯೋಪಾಧ್ಯಾಯರು ಪ್ರತಿ ವರ್ಷದ ಪ್ರಾರಂಭದಲ್ಲಿ ನಿಗದಿತ ನಮೂನೆಯಲ್ಲಿ (ಅನುಬಂಧ-2) ವಿದ್ಯಾರ್ಥಿಗಳ ಪಟ್ಟಿ ಮಾಡಿ ವಿದ್ಯಾರ್ಥಿ ವೇತನದ ಮಂಜೂರಾತಿಗೆ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಇವರಿಗೆ ಸಲ್ಲಿಸುವುದು. ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಪರಿಶೀಲಿಸಿ ಸಂಬಂಧಪಟ್ಟ ಮೊತ್ತ ಮಂಜೂರು ಮಾಡಿ ಪಾವತಿಸುವುದು. (ಇಂತಹ ಪ್ರಕರಣಗಳಲ್ಲಿ ಹೊಸದಾಗಿ ಅರ್ಜಿ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ).

3.2 ಯಾವುದೇ ವಿದ್ಯಾರ್ಥಿಯು ಒಂದು ಶಾಲೆಯನ್ನು ಬಿಟ್ಟು ಇನ್ನೊಂದು ಶಾಲೆಗೆ ಹೋದಾಗ ಹೊಸದಾಗಿ ಸೇರಿದ ಶಾಲೆಯ ಮುಖ್ಯೋಪಾಧ್ಯಾಯರಿಗೆ ಅರ್ಜಿ ಸಲ್ಲಿಸತಕ್ಕದ್ದು. ಅಂತಹ ಸಂದರ್ಭಗಳಲ್ಲಿ ಹಿಂದಿನ ಶಾಲೆಯ ಮೂಖ್ಯೋಪಾಧ್ಯಾಯರು ಸಂಬಂಧಪಟ್ಟ ಮಕ್ಕಳ ಹೆಸರುಗಳನ್ನು ಪಟ್ಟಿಯಿಂದ ತೆಗೆಯತಕ್ಕದ್ದು. ಯಾವುದೇ ಕಾರಣಕ್ಕೂ ಆ ವಿದ್ಯಾರ್ಥಿ ಹೆಸರಿನಲ್ಲಿ ವಿದ್ಯಾರ್ಥಿ ವೇತನ ಪಡೆಯತಕ್ಕದ್ದಲ್ಲ. ಒಂದು ಪಕ್ಷ ವಿದ್ಯಾರ್ಥಿ ವೇತನ ಪಡೆದಿದ್ದಲ್ಲಿ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರೇ ಹೊಣೆಗಾರರಾಗಿರುತ್ತಾರೆ.

ಅಂತಹ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸಂಬಂಧಿಸಿದ ವೆಚ್ಚವನ್ನು ಕ್ರಮವಾಗಿ ತಾಲ್ಲೂಕು ಪಂಚಾಯತ್ 2225-00-101-0-68 (ಯೋಜನೆ/ಯೋಜನೇತರ) ರ ಅಡಿ ಹಾಗೂ 2225-00-102-0-68 (ಯೋಜನೆ/ಯೋಜನೇತರ) ರ ಅಡಿ ಭರಿಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ : ಆಇ 370 ವೆಚ್ಚ-3/11, ದಿನಾಂಕ : 3-6-2011 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಮಾಜ ಕಲ್ಯಾಣ ಇಲಾಖೆ.

## ಅರ್ಜಿ ನಮೂನೆ–ಅನುಬಂಧ–1

ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದೇ ಇರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ Days Scholarship ಪಡೆಯಲು ಅರ್ಜಿ ನಮೂನೆ

ಶೈಕ್ಷಣಿಕ ವರ್ಷ 20 –20

ಭಾವಚಿತ್ರ (ಮುಖ್ಯೋಪಾಧ್ಯಾಯರಿಂದ ದೃಢೀಕರಿಸಿದ್ದು)

1ನೇ ತರಗತಿಯಿಂದ 10 ನೇ ತರಗತಿಯವರೆಗೆ :–

| | | |
|---|---|---|
| 1 | ವಿದ್ಯಾರ್ಥಿ ಹೆಸರು | |
| 2 | ವಿದ್ಯಾರ್ಥಿಯ ಐಡಿ (ID) | |
| 3 | ತಂದೆ/ತಾಯಿ/ಪೋಷಕರ ಹೆಸರು | |
| 4 | ಹುಟ್ಟಿದ ದಿನಾಂಕ | |
| 5 | ಬಾಲಕ ಅಥವಾ ಬಾಲಕಿ | |
| 6 | ವಿದ್ಯಾರ್ಥಿಯ ಪೂರ್ಣ ವಿಳಾಸ | |
| 7 | ವ್ಯಾಸಂಗ ಮಾಡುತ್ತಿರುವ ಶಾಲೆಯ ಹೆಸರು ಮತ್ತು ವಿಳಾಸ | ಗ್ರಾಮ :<br>ತಾಲ್ಲೂಕು :<br>ಜಿಲ್ಲೆ : |
| 8 | ವ್ಯಾಸಂಗ ಮಾಡುತ್ತಿರುವ ತರಗತಿ | |
| 9 | ಪರಿಶಿಷ್ಟ ಜಾತಿ/ಪಂಗಡ (ದೃಢೀಕರಿಸಿದ ಪ್ರಮಾಣ ಪತ್ರ ಲಗತ್ತಿಸುವುದು) | |
| 10 | ತಂದೆ/ತಾಯಿ/ಪೋಷಕ ವೃತ್ತಿ/ಉದ್ಯೋಗ | |
| 11 | ಕುಟುಂಬದ ವಾರ್ಷಿಕ ಆದಾಯ (ದೃಢೀಕರಿಸಿದ ವಾರ್ಷಿಕ ಆದಾಯ ಪತ್ರ ಲಗತ್ತಿಸುವುದು) | |
| 12 | ವಿದ್ಯಾರ್ಥಿ ಅಥವಾ ತಂದೆ/ತಾಯಿ/ಪೋಷಕರ<br>ಬ್ಯಾಂಕ್ ಖಾತೆ–ಬ್ಯಾಂಕಿನ ಹೆಸರು–<br>ಬ್ಯಾಂಕಿನ Branch ಮತ್ತು ವಿಳಾಸ<br>ವಿದ್ಯಾರ್ಥಿ ಖಾತೆ ನಂ. | |
| 13 | ಇತರೆ ಮಾಹಿತಿ | |

ಮೇಲ್ಕಂಡ ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿರುತ್ತವೆ. ಒಂದು ವೇಳೆ ನಾನು ತಿಳಿಸಿರುವ ಮಾಹಿತಿ ಸುಳ್ಳು ಎಂದು ತಿಳಿದುಬಂದಲ್ಲಿ ಇಲಾಖೆಯು ವಿಧಿಸುವ ಯಾವುದೇ ಶಿಕ್ಷೆಗೆ ಬದ್ಧನಾಗಿರುತ್ತೇನೆ.

ತಂದೆ/ತಾಯಿ/ಪೋಷಕರ ಸಹಿ ಅಭ್ಯರ್ಥಿಯ ಸಹಿ

. . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . .

**ಕಛೇರಿಯ ಉಪಯೋಗಕ್ಕಾಗಿ ಮಾತ್ರ (ಮುಖ್ಯೋಪಾಧ್ಯಾಯರ ಕಛೇರಿ)**

**ಶಾಲಾ ಮುಖ್ಯಸ್ಥರು ತೆಗೆದುಕೊಳ್ಳಬೇಕಾದ ಕ್ರಮಗಳು**

ನಾನು ಮೇಲ್ಕಂಡ ವಿವರಗಳನ್ನು ಶಾಲೆಯಲ್ಲಿ ಲಭ್ಯವಿರುವ ದಾಖಲು ಇತ್ಯಾದಿಗಳೊಂದಿಗೆ ಪರಿಶೀಲಿಸಿ ದೃಢೀಕರಿಸಿರುತ್ತೇನೆ.

ಮುಖ್ಯೋಪಾಧ್ಯಾಯರ ಸಹಿ ಮತ್ತು ಶಾಲೆಯ ಮೊಹರು

. . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . .

**ಕಛೇರಿಯ ಉಪಯೋಗಕ್ಕಾಗಿ ಮಾತ್ರ (ತಾಲ್ಲೂಕು ಕಛೇರಿ)**

**ಮಂಜೂರಾತಿ**

ಪರಿಶೀಲಿಸಿ ಶ್ರೀ . . . . . . . . . . . . . . . . . . . . . . . . . . .. . . . . . . ಮಗ/ಮಗಳು ಕುಮಾರ/ಕುಮಾರಿ . . . . . . . . . . . . . . . . . . . . . . . . . ಇವರಿಗೆ ರೂ. . . . . . . . . . . . . . . . . . . . . ವಿದ್ಯಾರ್ಥಿ ವೇತನವನ್ನು (Days Scholarship) ಮಂಜೂರು ಮಾಡಲಾಗಿದೆ.

ಸಹಿ

ದಿನಾಂಕ : ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ

## ಅನುಬಂಧ–2

**ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದೇ ಇರುವ ವಿದ್ಯಾರ್ಥಿಗಳ Days Scholarship ಪಡೆಯಲು ನವೀಕರಣ ಮಾಡಬೇಕಾದ ಪಟ್ಟಿ**

ಶಾಲೆಯ ಹೆಸರು ಮತ್ತು ವಿಳಾಸ : ಶೈಕ್ಷಣಿಕ ವರ್ಷ 20 – 20

| ಕ್ರಮ ಸಂ. | ವಿದ್ಯಾರ್ಥಿಯ ಹೆಸರು | ವಿದ್ಯಾರ್ಥಿಯ ಐಡಿ (ID) | ಬಾಲಕ/ಬಾಲಕಿ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ | ಈಗ ಓದುತ್ತಿರುವ ತರಗತಿ | ಹಿಂದಿನ ತರಗತಿ | ಹಿಂದಿನ ತರಗತಿಯಲ್ಲಿ ಮಂಜೂರಾದ ಮೊತ್ತ |
|---|---|---|---|---|---|---|---|
| | | | | | | | |
| | | | | | | | |

ಮೇಲ್ಕಂಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ನವೀಕರಿಸಲು ಕೋರಿದೆ.

ದಿನಾಂಕ :

ಮುಖ್ಯೋಪಾಧ್ಯಾಯರ ಸಹಿ ಮತ್ತು
ಶಾಲೆಯ ಮೊಹರು

ಸೂಚನೆ : ಇದನ್ನು ಸಂಬಂಧಿಸಿದ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಯವರಿಗೆ ಕಳುಹಿಸತಕ್ಕದ್ದು.

## ಅನುಬಂಧ–3

**ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿ ವಾಸಿಸದೇ ಇರುವ ವಿದ್ಯಾರ್ಥಿಗಳಿಗೆ Days Scholarship ಮಂಜೂರು ಮಾಡಿದ ಪಟ್ಟಿ**

ತಾಲ್ಲೂಕ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯ ಹೆಸರು : . . . . . . . . . . . . . . . . . . . . . . ಶೈಕ್ಷಣಿಕ ವರ್ಷ : 20 –20

| ಕ್ರ. ಸಂ. | ಶಾಲೆಯ ಹೆಸರು | ಶಾಲೆಯ ವಿಳಾಸ | ವಿದ್ಯಾರ್ಥಿಯ ಹೆಸರು | ವಿದ್ಯಾರ್ಥಿಯ ಐಡಿ (ID) | ಬಾಲಕ/ ಬಾಲಕಿ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ | ಓದುತ್ತಿರುವ ತರಗತಿ | ಮಂಜೂರು ಮಾಡಿದ ಮೊತ್ತ | ಬ್ಯಾಂಕಿನ ಹೆಸರು | ಬ್ಯಾಂಕಿನ ಶಾಖೆ | ಬ್ಯಾಂಕ್ ಖಾತೆ ನಂ. | ಷರಾ |
|---|---|---|---|---|---|---|---|---|---|---|---|---|
| | | | | | | | | | | | | |
| | | | | | | | | | | | | |
| | | | | | | | | | | | | |

ಸೂಚನೆ :– ಪ್ರತಿ ವರ್ಷವು ಈ ವಿವರಗಳನ್ನು ಕಂಪ್ಯೂಟರ್‌ನಲ್ಲಿಟ್ಟು ಪಟ್ಟಿಯನ್ನು ತಯಾರಿಸಬೇಕು. ತಯಾರಿಸಿದ ಪಟ್ಟಿಯ ಒಂದು ಪ್ರತಿಯನ್ನು ಸಂಬಂಧಿಸಿದ ಶಾಲೆಗೆ ಕಳುಹಿಸತಕ್ಕದ್ದು.

ಸಹಿ

ದಿನಾಂಕ : ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ

ಪ್ರತಿ :

1. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ . . . . . . . . . . . . . . . . . .
2. ಶಾಲೆಯ ಮುಖ್ಯೋಪಾಧ್ಯಾಯರು . . . . . . . . . . . . . . . . . .

ಪಿ.ಆರ್.ನಂ.1746

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ನಗರಗಳಲ್ಲಿ ವಾಸಿಸುವ ನಾಗರೀಕರಿಗೆ ಉತ್ತಮ ಪರಿಸರ ಒದಗಿಸಲು ಸಸ್ಯೋದ್ಯಾನಗಳನ್ನು ನಿರ್ಮಿಸುವ ಬಗ್ಗೆ–ಹೊಸ ಯೋಜನೆ.

**ಪ್ರಸ್ತಾವನೆ :**

ನಗರಗಳಲ್ಲಿ ವಾಸಿಸುವ ನಾಗರೀಕರಿಗೆ ಉತ್ತಮ ಪರಿಸರ ಒದಗಿಸುವ ಸಲುವಾಗಿ ಬೆಂಗಳೂರು ನಗರದಲ್ಲಿ 4 ಸಸ್ಯೋದ್ಯಾನಗಳನ್ನು ಹಾಗೂ ಪ್ರತಿ ಜಿಲ್ಲಾ ಕೇಂದ್ರದ ಸಮೀಪದಲ್ಲಿ ಇದೇ ಮಾದರಿಯ 1 ಉದ್ಯಾನವನವನ್ನು 2011–12ನೇ ಸಾಲಿನಲ್ಲಿ ನಿರ್ಮಿಸುವ ಹೊಸ ಯೋಜನೆಯನ್ನು ಸರ್ಕಾರವು ರೂಪಿಸಿದ್ದು, ಯೋಜನೆಯ ರೂಪುರೇಷೆಗಳು ಈ ಕೆಳಗಿನಂತಿವೆ:

1. ಬೆಂಗಳೂರು ನಗರದ ಸಮೀಪ 4 ಹೊಸ ಸಸ್ಯೋದ್ಯಾನಗಳನ್ನು ನಿರ್ಮಿಸುವುದು. ಪ್ರತಿ ಸಸ್ಯೋದ್ಯಾನದ ವಿಸ್ತೀರ್ಣ ಸುಮಾರು 300 ಹೆಕ್ಟೇರ್ ಪ್ರದೇಶವನ್ನು ಒಳಗೊಂಡಿರುತ್ತದೆ.

2. ಪ್ರತಿ ಜಿಲ್ಲೆಗೆ ಒಂದರಂತೆ ಒಟ್ಟು 29 ಸಸ್ಯೋದ್ಯಾನಗಳನ್ನು ನಿರ್ಮಿಸಲಾಗುವುದು. ಪ್ರತಿ ಸಸ್ಯೋದ್ಯಾನವು ಅಂದಾಜು 100 ಹೆಕ್ಟೇರ್ ಪ್ರದೇಶವನ್ನು ಒಳಗೊಂಡಿರುತ್ತದೆ.

3. ಪ್ರತಿ ಸಸ್ಯೋದ್ಯಾನಕ್ಕೆ ಕಾಂಪೌಂಡ್ ಅಥವಾ ಚೈನ್‌ಲಿಂಕ್ ಮೆಶ್ ಬೇಲಿಯಿಂದ ಸಂರಕ್ಷಣೆ ಒದಗಿಸಲಾಗುವುದು.

4. ಪ್ರತಿ ಸಸ್ಯೋದ್ಯಾನ ಪ್ರದೇಶದಲ್ಲಿ ಮಣ್ಣು ಮತ್ತು ಸಂರಕ್ಷಣೆ (Soil moisture Conservation) ಕ್ರಮಗಳನ್ನು ಕೈಗೊಳ್ಳಲಾಗುವುದು.

5. ಸಸ್ಯೋದ್ಯಾನ ಪ್ರದೇಶದಲ್ಲಿ ಪ್ರತಿ ಹೆಕ್ಟೇರಿಗೆ ಗರಿಷ್ಠ 400 ರಂತೆ ಸ್ಥಳೀಯ ಹೂ ಬಿಡುವ, ಹಣ್ಣು ನೀಡುವ ಮತ್ತು ಸಾಂಪ್ರದಾಯಿಕ ಸಸಿಗಳನ್ನು ನೆಟ್ಟು ಬೆಳೆಸಲಾಗುವುದು.

6. ಪ್ರತಿ ಸಸ್ಯೋದ್ಯಾನದಲ್ಲಿ ಥೀಂ ಪಾರ್ಕ್, ಪವಿತ್ರ ವನಗಳು, ಬಯೋ–ಡೈವರ್ಸಿಟಿ ಪಾರ್ಕ್‌ಗಳನ್ನು ಪರಿಸರ ಶಿಕ್ಷಣ ಉದ್ದೇಶಕ್ಕಾಗಿ ನಿರ್ಮಿಸಲಾಗುವುದು.

7. ಸಸ್ಯೋದ್ಯಾನಕ್ಕೆ ಭೇಟಿ ನೀಡುವ ಪ್ರವಾಸಿಗಳಿಗಾಗಿ ಸೌಲಭ್ಯಗಳನ್ನು ನಿರ್ಮಿಸುವಾಗ ಮಕ್ಕಳಿಗಾಗಿ ಆಟದ ಸೌಲಭ್ಯಗಳು, ಚಾರಣಿಗರಿಗಾಗಿ ಟ್ರೆಕ್ಕಿಂಗ್ ಪಾಥ್ ನಿರ್ಮಾಣ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗುವುದು.

ನಾಗರೀಕರಿಗೆ ಉತ್ತಮ ಪರಿಸರ ಕಲ್ಪಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 105 ಎಫ್‌ಎಪಿ 2011, ಬೆಂಗಳೂರು, ದಿನಾಂಕ : 5–7–2011 (1).**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ನಗರಗಳಲ್ಲಿ ವಾಸಿಸುವ ನಾಗರೀಕರಿಗೆ ಉತ್ತಮ ಪರಿಸರ ಒದಗಿಸುವ ಸಲುವಾಗಿ ಬೆಂಗಳೂರು ನಗರದಲ್ಲಿ ನಾಲ್ಕು ಸಸ್ಯೋದ್ಯಾನಗಳನ್ನು ಹಾಗೂ ಪ್ರತಿ ಜಿಲ್ಲಾ ಕೇಂದ್ರದ ಸಮೀಪದಲ್ಲಿ ಇದೇ ಮಾದರಿಯ ಒಂದು ಸಸ್ಯೋದ್ಯಾನವನ್ನು ರೂ. 5.00 (ಐದು ಕೋಟಿ ರೂಪಾಯಿಗಳು ಮಾತ್ರ) ಕೋಟಿಗಳ ವೆಚ್ಚದಲ್ಲಿ 2011–12ನೇ ಸಾಲಿನಲ್ಲಿ ಹೊಸ ಯೋಜನೆಯಾಗಿ ಅನುಷ್ಠಾನಗೊಳಿಸಲು ಸರ್ಕಾರ ಆದೇಶಿಸಿದೆ.

ಈ ಯೋಜನೆಗಾಗಿ ಹೊಸ ಲೆಕ್ಕಶೀರ್ಷಿಕೆಯನ್ನು ಮುಂದಿನ ಪೂರಕ ಅಂದಾಜಿನಲ್ಲಿ ಒದಗಿಸಲಾಗುವುದು. ಸದ್ಯಕ್ಕೆ ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2406–01–101–2–26–Development and Preservation of Devarakadu-139-Major Works" ಇದರಡಿ ಲಭ್ಯವಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಪಿಡಿ 25 ಪಿಎಫ್‌ಒ 2011, ದಿನಾಂಕ : 13–6–2011 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 710 ವೆಚ್ಚ–5/2011, ದಿನಾಂಕ : 4–7–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. ನಂ. 1747

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶಾಲಾ ಮಕ್ಕಳಿಗೆ ಹಸಿರೀಕರಣದ ಬಗ್ಗೆ ಉತ್ತೇಜಿಸಲು ಮಗುವಿಗೊಂದು ಮರ, ಶಾಲೆಗೊಂದು ವನ ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ಶಾಲಾ ಮಕ್ಕಳನ್ನು ಹಸಿರೀಕರಣದ ಬಗ್ಗೆ ಉತ್ತೇಜಿಸಲು ಆಸಕ್ತಿಯಿರುವ ಮಕ್ಕಳ ಮೂಲಕ ಗಿಡ ನೆಡಿಸಲು ಹಾಗೂ ಯಾರ ಮನೆಯ ಆವರಣದಲ್ಲಿ ಅಥವಾ ಕೃಷಿ ಭೂಮಿಯಲ್ಲಿ ಜಾಗ ಲಭ್ಯವಿದೆಯೋ ಅವರುಗಳಿಗೆ ಸಸಿಗಳನ್ನು ಪೂರೈಸಿ ವಿದ್ಯಾರ್ಥಿಗಳ ಸ್ವಯಂ ಪ್ರೇರಣೆಯಿಂದ ಸಸಿಗಳನ್ನು ಬೆಳೆಸುವ ಮೂಲಕ ಪರಿಸರ ಪ್ರಜ್ಞೆ ಬೆಳೆಸುವುದು ಯೋಜನೆಯ ಉದ್ದೇಶವಾಗಿದೆ. ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ರಾಜ್ಯಾದ್ಯಂತ ಶಾಲಾ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯಗಳ ಆವರಣಗಳಲ್ಲಿ ಗಿಡಗಳನ್ನು ನೆಡುವ ಯೋಜನೆಯನ್ನು ರೂಪಿಸಿದ್ದು, ಈ ಯೋಜನೆಯಲ್ಲಿ ಯಾವ ಯಾವ ಶಾಲಾ ಕಾಲೇಜುಗಳ ಆವರಣಗಳಲ್ಲಿ ಗಿಡಗಳನ್ನು ನೆಡುವ ಮೂಲಕ ಪರಿಸರ ಪ್ರಜ್ಞೆಯನ್ನು ಜಾಗೃತಗೊಳಿಸುವುದಾಗಿದೆ. ಇದಕ್ಕಾಗಿ 2011–12ನೇ ಸಾಲಿನಲ್ಲಿ ಮಗುವಿಗೊಂದು ಮರ, ಶಾಲೆಗೊಂದು ವನ ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಉದ್ದೇಶಿಸಿದ್ದು, ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 105 ಎಫ್‌ಎಪಿ 2011, ಬೆಂಗಳೂರು, ದಿನಾಂಕ : 05–07–2011 (2).**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶಾಲಾ ಮಕ್ಕಳಲ್ಲಿ ಪರಿಸರ ಪ್ರಜ್ಞೆಯನ್ನು ಜಾಗೃತಿಗೊಳಿಸುವ ಹಾಗೂ ಪರಿಸರವನ್ನು ಸಂರಕ್ಷಿಸುವ ಉದ್ದೇಶದಿಂದ 2011–12ನೇ ಸಾಲಿನಲ್ಲಿ ರೂ. 1.00 (ಒಂದು ಕೋಟಿ ರೂಪಾಯಿಗಳು ಮಾತ್ರ) ಕೋಟಿ ವೆಚ್ಚದಲ್ಲಿ ಮಗುವಿಗೊಂದು ಮರ, ಶಾಲೆಗೊಂದು ವನ ಎಂಬ ಹೊಸ ಯೋಜನೆಯನ್ನು ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಯೋಜನೆಗಾಗಿ ಹೊಸ ಲೆಕ್ಕಶೀರ್ಷಿಕೆಯನ್ನು ಮುಂದಿನ ಪೂರಕ ಅಂದಾಜಿನಲ್ಲಿ ಒದಗಿಸಲಾಗುವುದು. ಸದ್ಯಕ್ಕೆ ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2406–01–101–2–26– Development and Preservation of Devarakadu-139-Major Works" ಇದರಡಿ ಲಭ್ಯವಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 25 ಪಿಎಫ್‌ಒ 2011. ದಿನಾಂಕ 11–05–2011 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 710 ವೆಚ್ಚ–5/2011, ದಿನಾಂಕ 04–07–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1748

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈ ಯೋಜನೆಯಡಿ 2011-2012ನೇ ಸಾಲಿನ ಅರ್ಧವಾರ್ಷಿಕ ಆರ್ಥಿಕ ಮತ್ತು ಭೌತಿಕ ಗುರಿ ನಿಗದಿ ಹಾಗೂ ಕ್ರಿಯಾ ಯೋಜನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 3 ಅಂಅಸ/2011, ಬೆಂಗಳೂರು ದಿನಾಂಕ 01-04-2011 ಮತ್ತು ತಿದ್ದುಪಡಿ ದಿನಾಂಕ 02-04-2011.
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜಿ-2011/01/2011-ಎಸ್‌ಜಿಎಸ್‌ವೈ-1/ದಿನಾಂಕ 11-04-2011.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜಿ-2011/01/2011-ಎಸ್‌ಜಿಎಸ್‌ವೈ-1 (9), (38), (67) ದಿನಾಂಕ 15-04-2011.
4. ಕೇಂದ್ರ ಸರ್ಕಾರದ ಅ.ಸ. ಪತ್ರ ಸಂಖ್ಯೆ : 1/12011/04/2011 ಎಸ್‌ಜಿಎಸ್‌ವೈ (ಸಿ) ದಿನಾಂಕ 10-05-2011.

**ಪ್ರಸ್ತಾವನೆ :**

ಓದಲಾಗಿದೆ (1) ರ ಆದೇಶದ ಮೇರೆಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯನ್ನು 2011-12ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2011-12 ನೇ ಸಾಲಿಗೆ ರಾಜ್ಯದಲ್ಲಿ ಯೋಜನೆಯ ಅನುಷ್ಠಾನಕ್ಕಾಗಿ ರೂ. 11,551.00 ಲಕ್ಷಗಳನ್ನು ಹಾಗೂ ಸಾಲ ನೀಡಿಕೆಗಾಗಿ ರೂ. 24,260.00 ಲಕ್ಷಗಳನ್ನು ನಿಗದಿಪಡಿಸಿ ಓದಲಾಗಿದೆ (2) ಮತ್ತು ಓದಲಾಗಿದೆ (4) ರಲ್ಲಿ ಅನುಕ್ರಮವಾಗಿ ಹಂಚಿಕೆ ಮಾಡಿದೆ. ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25 ರ ಅನುಪಾತದಲ್ಲಿ ಅನುದಾನವನ್ನು ಭರಿಸಬೇಕಾಗಿದೆ. ಇದರಂತೆ, ಕೇಂದ್ರ ರೂ. 8,663.00 ಲಕ್ಷ ಮತ್ತು ರಾಜ್ಯ ಸರ್ಕಾರ ರೂ. 2,888.00 ಲಕ್ಷಗಳನ್ನು ಭರಿಸಬೇಕಾಗಿದೆ.

2011-12ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಎಸ್‌ಜಿಎಸ್‌ವೈ ಯನ್ನು ಪುನರ್ ರಚಿಸಿ ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಮಿಷನ್ (ಎನ್‌ಆರ್‌ಎಲ್‌ಎಂ) ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಿರುವುದರಿಂದ, ಎಸ್‌ಜಿಎಸ್‌ವೈ ಯನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು 2011-12ನೇ ಸಾಲಿನ ಅರ್ಧ ವಾರ್ಷಿಕ ಆರ್ಥಿಕ ಮತ್ತು ಭೌತಿಕ ಗುರಿ ನಿಗದಿಪಡಿಸಿ, ಕ್ರಿಯಾ ಯೋಜನೆಯನ್ನು ಜಿಲ್ಲಾ ಪಂಚಾಯತಿಗಳಿಗೆ ನೀಡಬೇಕಾಗಿದೆ. ಎಸ್‌ಜಿಎಸ್‌ವೈ ಯಡಿ 2011-12 ನೇ ಸಾಲಿನ ಹಂಚಿಕೆ ಮಾಡಿದ ರೂ. 11,551.00 ಲಕ್ಷಗಳಲ್ಲಿ ಅರ್ಧದಷ್ಟು ಅಂದರೆ ರೂ. 5,775.33 ಲಕ್ಷಗಳಿಗೆ ಹಾಗೂ ಅನುದಾನದ ಶೇಕಡ 10 ರಷ್ಟು ತರಬೇತಿಗೆ, ಶೇಕಡ 10 ರಷ್ಟು ಸುತ್ತುನಿಧಿಗೆ ಶೇಕಡ 20 ರಷ್ಟು ಮೂಲಭೂತ ಸೌಕರ್ಯಕ್ಕೆ ಮತ್ತು ಶೇಕಡ 60 ರಷ್ಟು ಸಹಾಯಧನಕ್ಕೆ ನಿಗದಿ ಪಡಿಸಿ ಅರ್ಧವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಬೇಕಾಗಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 17 ಎಸ್‌ಜಿವೈ 2011, ಬೆಂಗಳೂರು, ದಿನಾಂಕ : 06-07-2011**

ಎಸ್‌ಜಿಎಸ್‌ವೈ ಯಡಿ 2011-12 ನೇ ಸಾಲಿಗೆ ಜಿಲ್ಲಾವಾರು ನಿಗದಿಪಡಿಸಿದ ಅರ್ಧ ವಾರ್ಷಿಕ ಆರ್ಥಿಕ ಮತ್ತು ಭೌತಿಕ ಗುರಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧ 1, 2, 3 ಮತ್ತು 3ಎ ರಲ್ಲಿ, ತೆಗೆದುಕೊಳ್ಳಬಹುದಾದ ಆರ್ಥಿಕ ಚಟುವಟಿಕೆಗಳನ್ನು ಅನುಬಂಧ 4 ರಲ್ಲಿ, ತೆಗೆದುಕೊಳ್ಳಬಹುದಾದ ವಿವಿಧ ಚಟುವಟಿಕೆಗಳು ಅನುಬಂಧ-5 ರಲ್ಲಿ, ತರಬೇತಿ ನೀಡಲು ಗುರುತಿಸಿದ ತರಬೇತಿ ಕೇಂದ್ರಗಳನ್ನು ಅನುಬಂಧ-6 ರಲ್ಲಿ ನೀಡಲಾಗಿದೆ. ಇದರಂತೆ ಎಲ್ಲಾ ಜಿಲ್ಲಾ ಪಂಚಾಯತಿಗಳು ಕೆಳಕಂಡ ಷರತ್ತುಗಳನ್ವಯ ಕ್ರಮ ವಹಿಸುವುದು.

**ಷರತ್ತುಗಳು:**

- 2011-12ನೇ ಸಾಲಿನ ಜಿಲ್ಲಾ ಪಂಚಾಯತ್‌ಗಳಿಗೆ ಗುರಿ ನಿಗದಿಪಡಿಸುವಾಗ ಹಂಚಿಕೆಯ ಅರ್ಧಭಾಗಕ್ಕೆ ನೀಡಲಾಗಿದೆ. ಆದರೆ, ಜಿಲ್ಲಾ ಪಂಚಾಯತಿಗಳು ಕ್ರಿಯಾ ಯೋಜನೆ ತಯಾರಿಸುವಾಗ ಯೋಜನೆಯಡಿ ಲಭ್ಯವಿರುವ ಅನುದಾನ ಹಾಗೂ ಹಿಂದಿನ ಸಾಲುಗಳ ಭರಿಸಬೇಕಾದ ವೆಚ್ಚವಿದ್ದಲ್ಲಿ ಅದಕ್ಕೆ ಪ್ರಥಮ ಆದ್ಯತೆ ನೀಡಿ, ಅದಕ್ಕನುಗುಣವಾಗಿ ಕ್ರಿಯಾಯೋಜನೆ ತಯಾರಿಸಿ ಅನುಷ್ಠಾನಗೊಳಿಸತಕ್ಕದ್ದು.
- ಯೋಜನೆಯಡಿ ಆರ್ಥಿಕ, ಭೌತಿಕ, ಸಾಲ ನೀಡಿಕೆ (ಕ್ರೆಡಿಟ್ ಮೊಬಿಲೈಸೇಷನ್) ಮತ್ತು ವರ್ಗಾವಾರು ಗುರಿಯನ್ನು ನಿಗದಿಪಡಿಸಿರುವಂತೆ (ಅನುಬಂಧ 1, 2, 3 ಮತ್ತು 3ಎ) ಜಿಲ್ಲೆಗಳು ಪ್ರಗತಿಯನ್ನು ಸಾಧಿಸತಕ್ಕದ್ದು.
- 2011-12ನೇ ಸಾಲಿನಲ್ಲಿ ಪ್ರೈಮರಿ ಚಟುವಟಿಕೆಗೆ ಶೇಕಡ 70 ರಷ್ಟು (ಪ್ರೈಮರಿ ಚಟುವಟಿಕೆಗಳಾದ ಹೈನುಗಾರಿಕೆ ಮತ್ತು ಇತರೆ ಪ್ರಾಣಿಗಳ ಸಾಕಾಣಿಕೆ ಶೇಕಡ 60 ರಷ್ಟು ಹಾಗೂ ನೀರಾವರಿ ಮತ್ತು ಭೂಆಧಾರಿತ ಚಟುವಟಿಕೆಗಳಿಗೆ ಶೇಕಡ 10 ರಷ್ಟು) ಹಾಗೂ ಸೆಕೆಂಡರಿ ಮತ್ತು ಟರ್‌ಶಿಯರಿ ಚಟುವಟಿಕೆಗಳಿಗೆ ಶೇಕಡ 30 ರಷ್ಟನ್ನು ನಿಗದಿಪಡಿಸಲಾಗಿದೆ. ಜಿಲ್ಲೆಗಳು ಕ್ರಿಯಾ ಯೋಜನೆ ತಯಾರಿಸುವಾಗ, ಜಿಲ್ಲೆಯಲ್ಲಿನ ಪ್ರಮುಖ ಸೆಕೆಂಡರಿ ಮತ್ತು ಟರ್‌ಶಿಯರಿ ಚಟುವಟಿಕೆಗಳಿಗೆ ನಿಯಮಾನುಸಾರ ಆದ್ಯತೆ ನೀಡುವುದು.
- ಸದರಿ ಅರ್ಧ ವರ್ಷದಲ್ಲಿ ಸಹಾಯಧನವನ್ನು ಗುಂಪು ಫಲಾನುಭವಿಗಳಿಗೆ ಮಾತ್ರ ನೀಡುವುದು, ಆದರೆ ವೈಯಕ್ತಿಕ ಅಂಗವಿಕಲರಿಗೆ ಸಹಾಯಧನವನ್ನು ನೀಡಬಹುದು.
- ಎಸ್‌ಜಿಎಸ್‌ವೈ ಮಾರ್ಗಸೂಚಿಯಂತೆ, ಪರಿಶಿಷ್ಟ ಜಾತಿಗೆ ಶೇಕಡ 42, ಪರಿಶಿಷ್ಟ ಪಂಗಡಕ್ಕೆ ಶೇಕಡ 8, ಮಹಿಳೆಯರಿಗೆ ಶೇಕಡ 40, ಅಲ್ಪಸಂಖ್ಯಾತರಿಗೆ ಶೇಕಡ 15 ಹಾಗೂ ಅಂಗವಿಕಲರಿಗೆ ಶೇಕಡ 3 ರಷ್ಟು ಗುರಿಯನ್ನು ನೀಡಬೇಕಾಗಿದೆ. ಶೇಕಡಾವಾರು ಹಾಗೂ ವರ್ಗಾವಾರು ಸೌಲಭ್ಯವನ್ನು ಗಮನದಲ್ಲಿಟ್ಟುಕೊಂಡು ಕ್ರಿಯಾ ಯೋಜನೆ ತಯಾರಿಸುವುದು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಒಟ್ಟಾರೆ ಪ್ರಗತಿ ಕನಿಷ್ಠ 50 ರಷ್ಟು ಮತ್ತು ಅಂಗವಿಕಲರಿಗೆ ಹೆಚ್ಚಿನ ಆದ್ಯತೆ ನೀಡುವ ದೃಷ್ಟಿಯಿಂದ ಶೇಕಡ 4 ರಷ್ಟು ಗುರಿಯನ್ನು ನಿಗದಿಪಡಿಸಿದ್ದು, ಗರಿಷ್ಠ ಮಿತಿ ಇರುವುದಿಲ್ಲ.
- ಈಗಾಗಲೇ ಬ್ಯಾಂಕಿಗೆ ಕಳುಹಿಸಿದ ಅರ್ಜಿಗಳಿಗೆ ಸುತ್ತುನಿಧಿ ಮತ್ತು ಸಹಾಯಧನ ಬಿಡುಗಡೆಯಾಗದಿದ್ದಲ್ಲಿ ಅವುಗಳಿಗೆ ಆದ್ಯತೆ ನೀಡಿ ಕ್ರಿಯಾ ಯೋಜನೆಯಲ್ಲಿ ಅಳವಡಿಸತಕ್ಕದ್ದು.
- ಸರ್ಕಾರದಿಂದ ಅನುಮೋದನೆಯಾದ ತರಬೇತಿ ಸಂಸ್ಥೆಗಳಲ್ಲಿ ಮಾತ್ರ ತರಬೇತಿ ನೀಡುವುದು.

- ಮೂಲಭೂತ ಸೌಕರ್ಯದ ಅನುದಾನವನ್ನು ಈಗಾಗಲೇ ತೆಗೆದುಕೊಂಡಿರುವ ಕಟ್ಟಡ ಇತ್ಯಾದಿ ಇದ್ದಲ್ಲಿ ಅದಕ್ಕೆ ಆದ್ಯತೆ ನೀಡಿ ಪೂರ್ಣಗೊಳಿಸುವುದು. ಯಾವುದೇ ಹೊಸಕಟ್ಟಡ, ಇತ್ಯಾದಿಗಳನ್ನು ತೆಗೆದುಕೊಳ್ಳಬಾರದು.
- ತರಬೇತಿ ಮತ್ತು ಮೂಲಭೂತ ಸೌಕರ್ಯದ ನಿಧಿಯನ್ನು ಜಿಲ್ಲಾ ಪಂಚಾಯತಿಗಳೇ ಕಡ್ಡಾಯವಾಗಿ ಜಿಲ್ಲೆಯ ಅವಶ್ಯಕತೆಗನುಗುಣವಾಗಿ ನಿರ್ವಹಿಸುವುದು.
- ಕ್ರಿಯಾ ಯೋಜನೆ ರೂಪಿಸುವಾಗ ಕಾರ್ಯ ನಿರ್ವಹಿಸುತ್ತಿರುವ ಬೈಫ್ ಕೇಂದ್ರಗಳಿಗೆ ಪಾವತಿಸಬೇಕಾದ ಸೇವಾ ವೆಚ್ಚವನ್ನು ಅಳವಡಿಸಿಕೊಳ್ಳುವುದು.
- ಗ್ರಾಮೀಣ ಮಳಿಗೆ ನಿರ್ಮಾಣ (ವಿಲೇಜ್ ಹಾತ್) ಕ್ಕಾಗಿ ಬೇಕಾಗುವ ಪೂರ್ಣ ಅನುದಾನವನ್ನು ಎಸ್‌ಜಿಎಸ್‌ವೈ ಮೂಲಭೂತ ಸೌಕರ್ಯದಡಿ ಭರಿಸಲು ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಳ್ಳತಕ್ಕದ್ದು. ಕೇಂದ್ರ ಸರ್ಕಾರದಿಂದ ವಿಲೇಜ್ ಹಾತ್ ನ ಎರಡನೇ ಕಂತಿನ ಅನುದಾನ ಬಂದ ನಂತರ ಈ ಅನುದಾನವನ್ನು ಎಸ್‌ಜಿಎಸ್‌ವೈ ಅನುಷ್ಠಾನಕ್ಕಾಗಿ ಉಪಯೋಗಿಸತಕ್ಕದ್ದು.
- ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಎಸ್‌ಜಿಎಸ್‌ವೈ ಸಭೆಯನ್ನು ಮಾರ್ಗಸೂಚಿಯನ್ವಯ ನಿಯತವಾಗಿ ಮಾಡುವುದು.
- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಮಾಸಿಕ ಪ್ರಗತಿಯನ್ನು ನಿಗದಿತ ನಮೂನೆಗಳಲ್ಲಿ ಪ್ರತಿ ಮಾಹೆ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ ವೆಬ್‌ಸೈಟ್‌ಗೆ ಅಪ್‌ಲೋಡ್ ಮಾಡಿ ಪ್ರತಿಯನ್ನು ಜಿಲ್ಲಾ ಪಂಚಾಯತಿಯ ಯೋಜನಾ ನಿರ್ದೇಶಕರು ಮಾಹಿತಿ ಸರಿಯಿರುವ ಬಗ್ಗೆ ದೃಢೀಕರಿಸಿ ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಲುಪಿಸುವುದು.
- 2010–11 ನೇ ಸಾಲಿನ ಆಡಿಟ್ ವರದಿಯನ್ನು ಜುಲೈ ತಿಂಗಳಲ್ಲಿ ಕಳುಹಿಸುವುದು.
- ಕೇಂದ್ರ ಸರ್ಕಾರಕ್ಕೆ ಎರಡನೇ ಕಂತಿನ ಹಣ ಬಿಡುಗಡೆಗೆ ಪ್ರಸ್ತಾವನೆ ಕಳುಹಿಸುವ ಮುನ್ನ ಪ್ರಸಕ್ತ ಸಾಲಿನಲ್ಲಿ ಈ ಯೋಜನೆಯಡಿ ಜಿಲ್ಲೆಗಳಲ್ಲಿ ಲಭ್ಯವಿರುವ ಹಣದ ಶೇಕಡ 60 ರಷ್ಟು ವೆಚ್ಚ ಮಾಡಿರಬೇಕು.
- ಜಿಲ್ಲಾಪಂಚಾಯತ್‌ಗಳಿಗೆ ಕೇಂದ್ರ ಸರ್ಕಾರದಿಂದ ಎಸ್‌ಜಿಎಸ್‌ವೈ ಯಡಿ 2ನೇ ಕಂತಿನ ಅನುದಾನ ನೇರವಾಗಿ ಸ್ವೀಕೃತವಾದಲ್ಲಿ ಅರ್ಧವರ್ಷಕ್ಕೆ ನೀಡಿರುವ ಗುರಿಯ ಆಧಾರದ ಮೇಲೆ ಉಳಿದ ಕ್ರಿಯಾ ಯೋಜನೆಯನ್ನು ಈ ಮಾದರಿಯಲ್ಲಿಯೇ ರೂಪಿಸಿ ಯೋಜನೆ ಅನುಷ್ಠಾನಗೊಳಿಸುವುದು.
- ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕೆ ಅಗತ್ಯವಿರುವ ಸಮುದಾಯ ಸಂಪನ್ಮೂಲ ವ್ಯಕ್ತಿ (ಕಮ್ಯೂನಿಟಿ ರಿಸೋರ್ಸ್ ಪರ್ಸನ್ಸ್) ಮತ್ತು ಸ್ವಸಹಾಯ ಸಂಘಗಳ ಲೆಕ್ಕ ಪತ್ರದ ನಿರ್ವಹಣೆಗಾರರ (ಬುಕ್ ಕೀಪರ್ಸ್) ತರಬೇತಿ ಮತ್ತು ಸರ್ಕಾರ ಅನುಮೋದನೆ ನೀಡುವ ವಿವಿಧ ಬಾಬ್ತುಗಳ ವೆಚ್ಚಗಳನ್ನು ಮೂಲಭೂತಸೌಕರ್ಯ ನಿಧಿಯಿಂದ ಭರಿಸುವುದು.
- ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಯವರು ನೀಡಿರುವ ಎನ್‌ಆರ್‌ಎಲ್‌ಎಂ ಯೋಜನೆಯ ಚೌಕಟ್ಟು (frame work) ಎರಡನೇ ಅಧ್ಯಾಯದಲ್ಲಿ ತಿಳಿಸಿರುವಂತೆ.
  - ಅ) ಸುತ್ತುನಿಧಿ ಮತ್ತು ಬಂಡವಾಳ ಸಹಾಯಧನಕ್ಕಾಗಿ ಕಡ್ಡಾಯವಾಗಿ ಶ್ರೇಣೀಕರಣವಾದ ಸ್ವಸಹಾಯ ಸಂಘಗಳ ಪ್ರಸ್ತಾವನೆಗಳನ್ನು ಮಾತ್ರ ಪರಿಗಣಿಸತಕ್ಕದ್ದು.
  - ಆ) ಆರ್ಥಿಕ ಚಟುವಟಿಕೆ ತೆಗೆದುಕೊಳ್ಳುವ ಸ್ವಸಹಾಯ ಸಂಘಗಳು ಸಲ್ಲಿಸಿದ ಅರ್ಜಿಗಳನ್ನು ಬ್ಯಾಂಕಿಗೆ ಕಳುಹಿಸುವಾಗ, ಸದರಿ ಸಂಘಗಳು ಈ ಹಿಂದೆ ಒಂದುಬಾರಿಯಾದರೂ ಸಾಲವನ್ನು ತೆಗೆದುಕೊಂಡು ಇದನ್ನು ಪೂರ್ಣವಾಗಿ ಮರುಸಂದಾಯ ಮಾಡಿರಬೇಕು ಅಥವಾ ನಿಯತವಾಗಿ ಬ್ಯಾಂಕಿಗೆ ಮರುಪಾವತಿ ಮಾಡಿರುವುದನ್ನು ಖಾತ್ರಿ ಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಅಮಿತಾ ಪ್ರಸಾದ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ –1

**ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2011–2012 (ಅರ್ಧವಾರ್ಷಿಕ)ನೇ ಸಾಲಿಗೆ ನಿಗದಿಗೊಳಿಸಿರುವ ಆರ್ಥಿಕ ಮತ್ತು ಭೌತಿಕ ಗುರಿ**

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | 2011–12ನೇ ಸಾಲಿನ ನಿಗದಿತ ಅನುದಾನ | 2011–12ನೇ ಸಾಲಿನ ಅರ್ಧ ವಾರ್ಷಿಕ ಹಂಚಿಕೆ | ಮೂಲ ಭೂತ ಸೌಕರ್ಯ ಅಭಿವೃದ್ಧಿ ಗಾಗಿ | ತರಬೇತಿ ಗಾಗಿ | ಸುತ್ತು ನಿಧಿ | ಸಹಾಯಧನ ನೀಡಿಕೆಗಾಗಿ | | | ಸಾಲ ನೀಡಿಕೆ (ಪೂರ್ಣವರ್ಷಕ್ಕೆ) (ಕ್ರೆಡಿಟ್ ಮೊಬಿಲೈಜೇಷನ್) | | | ಸ್ವರೋಜ್‌ಗಾರಿಗಳ ಸಂಖ್ಯೆ | | | |
|---|---|---|---|---|---|---|---|---|---|---|---|---|---|---|---|---|
| | | | | | | | ಒಟ್ಟು | ಗುಂಪು ಸ್ವರೋಜ್ ಗಾರಿಗಳಿಗೆ | ವೈಯಕ್ತಿಕ ಅಂಗವಿಕಲ ಸ್ವರೋಜ್ ಗಾರಿಗಳಿಗೆ | ಒಟ್ಟು | ಗುಂಪು ಗಳಿಗೆ | ವೈಯಕ್ತಿಕ ಅಂಗವಿಕಲ ಸ್ವರೋಜ್ ಗಾರಿಗಳಿಗೆ | ಒಟ್ಟು ಸ್ವರೋಜ್ ಗಾರಿಗಳು | ಗುಂಪು ಗಳು | ಗುಂಪು ಸ್ವರೋಜ್ ಗಾರಿಗಳು ** | ವೈಯಕ್ತಿಕ ಅಂಗ ವಿಕಲ ಸ್ವರೋಜ್ ಗಾರಿಗಳಿಗೆ |
| 1 | ಬಾಗಲಕೋಟೆ | 272.61 | 136.31 | 27.26 | 13.63 | 13.63 | 81.78 | 78.51 | 3.27 | 572.49 | 549.59 | 22.90 | 975 | 79 | 942 | 33 |
| 2 | ಬೆಂಗಳೂರು ಗ್ರಾ | 150.43 | 75.21 | 15.04 | 7.52 | 7.52 | 45.13 | 43.32 | 1.81 | 315.90 | 303.26 | 12.64 | 538 | 43 | 520 | 18 |
| 3 | ಬೆಂಗಳೂರು ನಗರ | 116.07 | 58.03 | 11.61 | 5.80 | 5.80 | 34.82 | 33.43 | 1.39 | 243.74 | 233.99 | 9.75 | 415 | 33 | 401 | 14 |

| | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| 4 | ಬೆಳಗಾಂ | 805.80 | 402.90 | 80.58 | 40.29 | 40.29 | 241.74 | 323.07 | 9.67 | 1692.18 | 1624.49 | 67.69 | 2882 | 232 | 2785 | 97 |
| 5 | ಬಳ್ಳಾರಿ | 640.27 | 320.13 | 64.03 | 32.01 | 32.01 | 192.08 | 184.40 | 7.68 | 1344.56 | 1290.78 | 53.78 | 2290 | 184 | 2213 | 77 |
| 6 | ಬೀದರ್ | 453.77 | 226.89 | 45.38 | 22.69 | 22.69 | 136.13 | 130.69 | 5.45 | 952.92 | 914.81 | 38.12 | 1623 | 131 | 1568 | 54 |
| 7 | ಬಿಜಾಪುರ | 534.16 | 267.08 | 53.42 | 26.71 | 26.71 | 160.25 | 153.84 | 6.41 | 1121.74 | 1076.87 | 44.87 | 1910 | 154 | 1846 | 64 |
| 8 | ಚಾಮರಾಜ ನಗರ | 565.39 | 282.69 | 56.54 | 28.27 | 28.27 | 169.62 | 262.83 | 6.78 | 1187.31 | 1139.82 | 47.49 | 2022 | 163 | 1954 | 68 |
| 9 | ಚಿಕ್ಕಮಗಳೂರು | 256.75 | 128.37 | 25.67 | 12.84 | 12.84 | 77.02 | 73.94 | 3.08 | 539.17 | 517.60 | 21.57 | 918 | 74 | 887 | 31 |
| 10 | ಚಿಕ್ಕಬಳ್ಳಾಪುರ | 296.97 | 148.49 | 29.70 | 14.85 | 14.85 | 89.09 | 86.53 | 3.56 | 623.64 | 598.70 | 24.95 | 1062 | 86 | 1026 | 36 |
| 11 | ಚಿತ್ರದುರ್ಗ | 456.05 | 228.03 | 45.61 | 22.80 | 22.80 | 136.82 | 131.34 | 5.47 | 957.71 | 919.40 | 38.31 | 1631 | 131 | 1576 | 55 |
| 12 | ದಕ್ಷಿಣ ಕನ್ನಡ | 247.89 | 123.95 | 24.79 | 12.39 | 12.39 | 74.37 | 71.39 | 2.97 | 520.58 | 499,75 | 20.82 | 886 | 71 | 857 | 30 |
| 13 | ದಾವಣಗೆರೆ | 368.12 | 184.06 | 36.81 | 18.41 | 18.41 | 110.44 | 106.02 | 4.42 | 773.05 | 742.13 | 30.92 | 1316 | 106 | 1272 | 44 |
| 14 | ಧಾರವಾಡ | 229.64 | 114.82 | 22.96 | 11.48 | 11.48 | 68.89 | 66.14 | 2.76 | 482.24 | 462.95 | 19.29 | 821 | 66 | 794 | 28 |
| 15 | ಗದಗ್ | 364,48 | 182.24 | 36.45 | 18.22 | 18.22 | 109.34 | 104.97 | 4.37 | 765.41 | 734.79 | 30.62 | 1303 | 105 | 1260 | 44 |
| 16 | ಗುಲ್ಬರ್ಗಾ | 458.01 | 229.01 | 45.80 | 22.90 | 22.90 | 137.40 | 131.91 | 5.50 | 961.83 | 923.35 | 38.47 | 1638 | 132 | 1583 | 55 |
| 17 | ಹಾಸನ | 332.72 | 166.36 | 33.27 | 16.64 | 16.64 | 99.82 | 95.82 | 3.99 | 698.71 | 670.76 | 27.95 | 1190 | 96 | 1150 | 40 |
| 18 | ಹಾವೇರಿ | 398.01 | 199.01 | 39.80 | 19.90 | 19.90 | 119.40 | 114.63 | 4.78 | 835.83 | 802.39 | 33.43 | 1423 | 115 | 1376 | 48 |
| 19 | ಕೊಡಗು | 93.53 | 46.77 | 9.35 | 4.68 | 4.68 | 28.06 | 26.94 | 1.12 | 196.42 | 188.56 | 7.86 | 334 | 27 | 323 | 11 |
| 20 | ಕೋಲಾರ | 335.52 | 167.76 | 33.55 | 16.78 | 16.78 | 100.66 | 96.63 | 4.03 | 704.59 | 676.41 | 28.18 | 1200 | 97 | 1160 | 40 |
| 21 | ಕೊಪ್ಪಳ | 572.65 | 286.33 | 57.27 | 28.63 | 28.63 | 171.80 | 164.92 | 6.87 | 1202.57 | 1154.47 | 48.10 | 2048 | 165 | 1979 | 69 |
| 22 | ಮಂಡ್ಯ | 433.12 | 216.56 | 43.31 | 21.66 | 21.66 | 129.94 | 124.74 | 5.20 | 909.55 | 873.17 | 36.38 | 1549 | 125 | 1497 | 52 |
| 23 | ಮೈಸೂರು | 527.89 | 263.95 | 52.79 | 26.39 | 26.39 | 158.37 | 152.03 | 6.33 | 1108.58 | 1064.23 | 44.34 | 1888 | 152 | 1824 | 63 |
| 24 | ರಾಯಚೂರು | 539.25 | 269.63 | 53.93 | 26.96 | 26.96 | 161.78 | 155.30 | 6.47 | 1132.43 | 1087.13 | 45.30 | 1928 | 155 | 1864 | 65 |
| 25 | ರಾಮನಗರ | 269.33 | 134.67 | 26.93 | 13.47 | 13.47 | 80.80 | 77.57 | 3.23 | 565.60 | 542.98 | 22.62 | 963 | 78 | 931 | 32 |
| 26 | ಶಿವಮೊಗ್ಗ | 458.71 | 229.35 | 45.87 | 22.94 | 22.94 | 137.61 | 132.11 | 5.50 | 963.28 | 924.75 | 38.53 | 1640 | 132 | 1585 | 55 |
| 27 | ತುಮಕೂರು | 679.95 | 339.97 | 67.99 | 34.00 | 34.00 | 203.98 | 195.82 | 8.16 | 1427.89 | 1370.77 | 57.12 | 2431 | 196 | 2350 | 82 |
| 28 | ಉಡುಪಿ | 201.81 | 100.91 | 20.18 | 10.09 | 10.09 | 60.54 | 58.12 | 2.42 | 423.81 | 406.86 | 16.95 | 722 | 58 | 697 | 24 |
| 29 | ಉತ್ತರ ಕನ್ನಡ | 285.96 | 142.98 | 28.60 | 14.30 | 14.30 | 85.79 | 82.36 | 3.43 | 600.52 | 576.50 | 24.02 | 1023 | 82 | 988 | 34 |
| 30 | ಯಾದಗಿರಿ | 205.79 | 102.89 | 20.58 | 10.29 | 10.29 | 61.74 | 59.27 | 2.47 | 432.15 | 414.87 | 17.29 | 736 | 59 | 711 | 25 |
| | | 1550.67 | 5775.33 | 1155.07 | 577.53 | 577.53 | 3465.20 | 3326.59 | 138.61 | 24256.40 | 3286.14 | 970.26 | 41305 | 3327 | 39919 | 1386 |

** ಪ್ರತಿ ಗುಂಪಿಗೆ 12 ಸ್ವರೋಜ್‌ಗಾರಿಗಳೆಂದು ಅಂದಾಜಿಸಲಾಗಿದೆ.

ಜಿಲ್ಲೆಗಳು ಗುಂಪು ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡುವುದು, ವೈಯಕ್ತಿಕ – ಅಂಗವಿಕಲ ಸ್ವರೋಜ್‌ಗಾರಿಗಳಿಗೆ ಮಾತ್ರ

## ಅನುಬಂಧ –2

**ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2011–2012 (ಅರ್ಧವಾರ್ಷಿಕ)ನೇ ಸಾಲಿಗೆ ನಿಗದಿಗೊಳಿಸಿರುವ ಆರ್ಥಿಕ ಮತ್ತು ಭೌತಿಕ ಗುರಿ**

ರೂ.ಲಕ್ಷಗಳಲ್ಲಿ

| ಕ್ರ. ಸಂ. | ಜಿಲ್ಲಾ ಪಂಚಾಯಿತಿಯ ಹೆಸರು | 2011–12ನೇ ಸಾಲಿನ ಅನುದಾನದ ಹಂಚಿಕೆ | | | 2011–12ನೇ ಸಾಲಿನ ಅರ್ಧವಾರ್ಷಿಕ ಹಂಚಿಕೆ | | | ವರ್ಗಾವಾರು ನಿಗದಿತ ಅನುದಾನ (ಸಹಾಯಧನ) | | | | | | |
|---|---|---|---|---|---|---|---|---|---|---|---|---|---|---|
| | | ಒಟ್ಟು | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | ಪ.ಜಾತಿ | ಪ.ವರ್ಗ | ಅಲ್ಪಸಂಖ್ಯಾತರು | ಇತರರು | ಮಹಿಳೆಯರು | ಅಂಗವಿಕಲ ------- (ವೈಯಕ್ತಿಕ) |
| 1 | ಬಾಗಲಕೋಟೆ | 272.61 | 204.46 | 68.15 | 136.31 | 102.23 | 34.08 | 81.78 | 34.35 | 6.54 | 12.27 | 25.35 | 32.71 | 3.27 |
| 2 | ಬೆಂಗಳೂರು ಗ್ರಾ | 150.43 | 112.82 | 37.61 | 75.21 | 56.41 | 18.80 | 45.13 | 18.95 | 3.61 | 6.77 | 13.99 | 18.05 | 1.81 |
| 3 | ಬೆಂಗಳೂರು ನಗರ | 116.07 | 87.05 | 29.02 | 58.03 | 43.53 | 14.51 | 34.82 | 14.62 | 2.79 | 5.22 | 10.79 | 13.93 | 1.39 |
| 4 | ಬೆಳಗಾಂ | 805.80 | 604.35 | 201.45 | 402.90 | 302.18 | 100.73 | 241.74 | 101.53 | 19.34 | 36.26 | 74.94 | 96.70 | 9.67 |
| 5 | ಬಳ್ಳಾರಿ | 640.27 | 480.20 | 160.07 | 320.13 | 240.10 | 80.03 | 192.08 | 80.67 | 15.37 | 28.81 | 59.54 | 76.83 | 7.68 |
| 6 | ಬೀದರ್ | 453.77 | 340.33 | 113.44 | 226.89 | 170.17 | 56.72 | 136.13 | 57.18 | 10.89 | 20.42 | 42.20 | 54.45 | 5.45 |
| 7 | ಬಿಜಾಪುರ | 534.16 | 400.62 | 133.54 | 267.08 | 200.31 | 66.77 | 160.25 | 67.30 | 12.82 | 24.04 | 49.68 | 64.10 | 6.41 |
| 8 | ಚಾಮರಾಜನಗರ | 565.39 | 424.04 | 141.35 | 282.69 | 212.02 | 70.67 | 169.62 | 71.24 | 13.57 | 25.44 | 52.58 | 67.85 | 6.78 |
| 9 | ಚಿಕ್ಕಮಗಳೂರು | 256.75 | 192.56 | 64.19 | 128.37 | 96.28 | 32.09 | 77.02 | 32.35 | 6.16 | 11.55 | 23.88 | 30.81 | 3.08 |
| 10 | ಚಿಕ್ಕಬಳ್ಳಾಪುರ | 296.97 | 222.73 | 74.24 | 148.49 | 111.37 | 37.12 | 89.09 | 37.42 | 7.13 | 13.36 | 27.62 | 35.64 | 3.56 |
| 11 | ಚಿತ್ರದುರ್ಗ | 456.05 | 342.04 | 114.01 | 228.03 | 171.02 | 57.01 | 136.82 | 57.46 | 10.95 | 20.52 | 42.41 | 54.73 | 5.47 |
| 12 | ದಕ್ಷಿಣ ಕನ್ನಡ | 247.89 | 185.92 | 61.97 | 123.95 | 92.96 | 30.99 | 74.37 | 31.23. | 5.95 | 11.16 | 23.05 | 29.75 | 2.97 |
| 13 | ದಾವಣಗೆರೆ | 368.12 | 276.09 | 92.03 | 184.06 | 138.05 | 46.02 | 110.44 | 46.38 | 8.83 | 16.57 | 34.24 | 44.17 | 4.42 |
| 14 | ಧಾರವಾಡ | 229.64 | 172.23 | 57.41 | 114.82 | 86.12 | 28.71 | 68.89 | 28.93 | 5.51 | 10.33 | 21.36 | 27.56 | 2.76 |
| 15 | ಗದಗ್ | 364,48 | 273.36 | 91.12 | 182.24 | 136.68 | 45.56 | 109.34 | 45.92 | 8.75 | 16.40 | 33.90 | 43.74 | 4.37 |
| 16 | ಗುಲ್ಬರ್ಗಾ | 458.01 | 343.51 | 114.50 | 229.01 | 171.76 | 57.25 | 137.40 | 57.71 | 10.99 | 20.61 | 42.60 | 54.96 | 5.50 |
| 17 | ಹಾಸನ | 332.72 | 249.54 | 83.18 | 166.36 | 124.77 | 41.59 | 99.82 | 41.92 | 7.99 | 14.97 | 30.94 | 39.93 | 3.99 |
| 18 | ಹಾವೇರಿ | 398.01 | 298.51 | 99.50 | 199.01 | 149.26 | 49.75 | 119.40 | 50.15 | 9.55 | 17.91 | 37.02 | 47.76 | 4.78 |
| 19 | ಕೊಡಗು | 93.53 | 70.15 | 23.38 | 46.77 | 35.08 | 11.69 | 28.06 | 11.79 | 2.24 | 4.21 | 8.70 | 11.22 | 1.12 |
| 20 | ಕೋಲಾರ | 335.52 | 251.64 | 83.88 | 167.76 | 125.82 | 41.94 | 100.66 | 42.28 | 8.05 | 15.10 | 31.20 | 40.26 | 4.03 |
| 21 | ಕೊಪ್ಪಳ | 572.65 | 429.49 | 143.16 | 286.33 | 214.75 | 71.58 | 171.80 | 72.15 | 13.74 | 25.77 | 53.26 | 68.72 | 6.87 |
| 22 | ಮಂಡ್ಯ | 433.12 | 324.84 | 108.28 | 216.56 | 162.42 | 54.14 | 129.94 | 54.57 | 10.39 | 19.49 | 40.28 | 51.97 | 5.20 |
| 23 | ಮೈಸೂರು | 527.89 | 395.92 | 131.97 | 263.95 | 197.96 | 65.99 | 158.37 | 66.51 | 12.67 | 23.76 | 49.09 | 63.35 | 6.33 |
| 24 | ರಾಯಚೂರು | 539.25 | 404.44 | 134.81 | 269.63 | 202.22 | 67.41 | 161.78 | 67.95 | 12.94 | 24.27 | 50.15 | 64.71 | 6.47 |
| 25 | ರಾಮನಗರ | 269.33 | 202.00 | 67.33 | 134.67 | 101.00 | 33.67 | 80.80 | 33.94 | 6.46 | 12.12 | 25.05 | 32.32 | 3.23 |
| 26 | ಶಿವಮೊಗ್ಗ | 458.71 | 344.03 | 114.68 | 229.35 | 172.02 | 57.34 | 137.61 | 57.80 | 11.01 | 20.64 | 42.66 | 55.04 | 5.50 |
| 27 | ತುಮಕೂರು | 679.95 | 509.96 | 169.99 | 339.97 | 254.98 | 84.99 | 203.98 | 85.67 | 16.32 | 30.60 | 63.24 | 81.59 | 8.16 |
| 28 | ಉಡುಪಿ | 201.81 | 151.36 | 50.45 | 100.91 | 75.68 | 25.23 | 60.54 | 25.43 | 4.84 | 9.08 | 18.77 | 24.22 | 2.42 |
| 29 | ಉತ್ತರ ಕನ್ನಡ | 285.96 | 214.47 | 71.49 | 142.98 | 107.24 | 35.75 | 85.79 | 36.03 | 6.86 | 12.87 | 26.59 | 34.32 | 3.43 |
| 30 | ಯಾದಗಿರಿ | 205.79 | 154.34 | 51.45 | 102.89 | 77.17 | 25.72 | 61.74 | 25.93 | 4.94 | 9.26 | 19.14 | 24.69 | 2.47 |
| | | 11550.67 | 8663.00 | 2887.67 | 5775.33 | 4331.50 | 1443.83 | 3465.20 | 1455.38 | 277.22 | 519.78 | 1074.21 | 1386.08 | 138.61 |

## ಅನುಬಂಧ –3

**ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2011–2012 (ಅರ್ಧವಾರ್ಷಿಕ)ನೇ ಸಾಲಿಗೆ ನಿಗದಿಗೊಳಿಸಿರುವ ವರ್ಗಾವಾರು ಭೌತಿಕ ಗುರಿ**

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಗುಂಪುಗಳು (ಸಂಖ್ಯೆಗಳಲ್ಲಿ) | | | | | | ಗುಂಪು ಸ್ವರೋಜ್‌ಗಾರಿಗಳು (ಸಂಖ್ಯೆಗಳಲ್ಲಿ) | | | | | | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|---|---|---|---|---|---|
| | | ಒಟ್ಟು | ಪ.ಜಾತಿ | ಪ.ಪಂಗಡ | ಅಲ್ಪಸಂಖ್ಯಾತರು | ಇತರರು | ಮಹಿಳೆಯರು | ಒಟ್ಟು | ಪ.ಜಾತಿ | ಪ.ಪಂಗಡ | ಅಲ್ಪಸಂಖ್ಯಾತರು | ಇತರರು | ಮಹಿಳೆಯರು | | |
| 1 | ಬಾಗಲಕೋಟೆ | 79 | 33 | 6 | 12 | 24 | 31 | 942 | 396 | 75 | 141 | 292 | 377 | 32.71 | 975 |
| 2 | ಬೆಂಗಳೂರು ಗ್ರಾ | 43 | 18 | 3 | 6 | 13 | 17 | 520 | 218 | 42 | 78 | 161 | 208 | 18 | 538 |
| 3 | ಬೆಂಗಳೂರು ನಗರ | 33 | 14 | 3 | 5 | 10 | 13 | 401 | 168 | 32 | 60 | 124 | 160 | 14 | 415 |
| 4 | ಬೆಳಗಾಂ | 232 | 97 | 19 | 35 | 72 | 93 | 2785 | 1170 | 223 | 418 | 863 | 1114 | 97 | 2882 |
| 5 | ಬಳ್ಳಾರಿ | 184 | 77 | 15 | 28 | 57 | 74 | 2213 | 929 | 177 | 332 | 686 | 885 | 77 | 2290 |
| 6 | ಬೀದರ್ | 131 | 55 | 10 | 20 | 41 | 52 | 1568 | 659 | 125 | 235 | 486 | 627 | 54 | 1623 |
| 7 | ಬಿಜಾಪುರ | 154 | 65 | 12 | 23 | 48 | 62 | 1846 | 775 | 148 | 277 | 572 | 738 | 64 | 1910 |
| 8 | ಚಾಮರಾಜನಗರ | 163 | 68 | 13 | 24 | 50 | 65 | 1954 | 821 | 156 | 293 | 606 | 782 | 68 | 2022 |
| 9 | ಚಿಕ್ಕಮಗಳೂರು | 74 | 31 | 6 | 11 | 23 | 30 | 887 | 373 | 71 | 133 | 275 | 355 | 31 | 918 |
| 10 | ಚಿಕ್ಕಬಳ್ಳಾಪುರ | 86 | 36 | 7 | 13 | 27 | 34 | 1026 | 431 | 82 | 154 | 318 | 411 | 36 | 1062 |
| 11 | ಚಿತ್ರದುರ್ಗ | 131 | 55 | 11 | 20 | 41 | 53 | 1576 | 662 | 126 | 236 | 489 | 630 | 55 | 1631 |
| 12 | ದಕ್ಷಿಣ ಕನ್ನಡ | 71 | 30 | 6 | 11 | 22 | 29 | 857 | 360 | 69 | 129 | 266 | 343 | 30 | 886 |
| 13 | ದಾವಣಗೆರೆ | 106 | 45 | 8 | 16 | 33 | 42 | 1272 | 534 | 102 | 191 | 394 | 509 | 44 | 1316 |
| 14 | ಧಾರವಾಡ | 66 | 28 | 5 | 10 | 21 | 26 | 794 | 333 | 63 | 119 | 246 | 317 | 28 | 821 |
| 15 | ಗದಗ್ | 105 | 44 | 8 | 16 | 33 | 42 | 1260 | 529 | 101 | 189 | 390 | 504 | 44 | 1303 |
| 16 | ಗುಲ್ಬರ್ಗಾ | 132 | 55 | 11 | 20 | 41 | 53 | 1583 | 665 | 127 | 237 | 491 | 633 | 55 | 1638 |
| 17 | ಹಾಸನ | 96 | 40 | 8 | 14 | 30 | 38 | 1150 | 483 | 92 | 172 | 356 | 460 | 40 | 1190 |
| 18 | ಹಾವೇರಿ | 115 | 48 | 9 | 17 | 36 | 46 | 1376 | 578 | 110 | 206 | 426 | 550 | 48 | 1423 |
| 19 | ಕೊಡಗು | 27 | 11 | 2 | 4 | 8 | 11 | 323 | 136 | 26 | 48 | 100 | 129 | 11 | 334 |
| 20 | ಕೋಲಾರ | 97 | 41 | 8 | 14 | 30 | 39 | 1160 | 487 | 93 | 174 | 359 | 464 | 40 | 1200 |
| 21 | ಕೊಪ್ಪಳ | 165 | 69 | 13 | 25 | 51 | 66 | 1979 | 831 | 158 | 297 | 614 | 792 | 69 | 2048 |
| 22 | ಮಂಡ್ಯ | 125 | 52 | 10 | 19 | 39 | 50 | 1497 | 629 | 120 | 225 | 464 | 599 | 52 | 1549 |
| 23 | ಮೈಸೂರು | 152 | 64 | 12 | 23 | 47 | 61 | 1824 | 766 | 146 | 274 | 566 | 730 | 63 | 1888 |
| 24 | ರಾಯಚೂರು | 155 | 65 | 12 | 23 | 48 | 62 | 1864 | 783 | 149 | 280 | 578 | 745 | 65 | 1928 |
| 25 | ರಾಮನಗರ | 78 | 33 | 6 | 12 | 24 | 31 | 931 | 391 | 74 | 140 | 289 | 372 | 32 | 963 |
| 26 | ಶಿವಮೊಗ್ಗ | 132 | 55 | 11 | 20 | 41 | 53 | 1585 | 666 | 127 | 238 | 491 | 634 | 55 | 1640 |
| 27 | ತುಮಕೂರು | 196 | 82 | 16 | 29 | 61 | 78 | 2350 | 987 | 188 | 352 | 728 | 940 | 82 | 2431 |
| 28 | ಉಡುಪಿ | 58 | 24 | 5 | 9 | 18 | 23 | 697 | 293 | 56 | 105 | 216 | 279 | 24 | 722 |
| 29 | ಉತ್ತರ ಕನ್ನಡ | 82 | 35 | 7 | 12 | 26 | 33 | 988 | 415 | 79 | 148 | 306 | 395 | 34 | 1023 |
| 30 | ಯಾದಗಿರಿ | 59 | 25 | 5 | 9 | 18 | 24 | 711 | 299 | 57 | 107 | 220 | 284 | 25 | 736 |
| | | 3327 | 1397 | 266 | 499 | 1031 | 1331 | 39919 | 16766 | 3194 | 5988 | 12375 | 15968 | 1386 | 41305 |

## ಅನುಬಂಧ –3ಎ

### ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ 2011–2012 (ಅರ್ಧವಾರ್ಷಿಕ)ನೇ ಸಾಲಿಗೆ ನಿಗದಿಗೊಳಿಸಿರುವ ಗುರಿ

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಸುತ್ತು ನಿಧಿ | | ತರಬೇತಿ | | ರಚಿಸಬೇಕಾದ ಸ್ವಸಹಾಯ ಸಂಘಗಳ | ಗ್ರೇಡ್ 1 ಮತ್ತು 2 ರ ಹಂತಕ್ಕೆ ತರಬೇಕಾದ ಸ್ವಸಹಾಯ ಸಂಘಗಳ ಗುರಿ | | ಅರ್ಜಿಗಳನ್ನು ಬ್ಯಾಂಕುಗಳಿಗೆ ಕಳುಹಿಸಬೇಕಾದ ಗುರಿ | ಫೆಡರೇಷನ್ ರಚನೆ ಮಾಡಬೇಕಾದ ಗುರಿ | | | ಬಡತನ ರೇಖೆಯಿಂದ ಮೇಲೆ ಬರಬೇಕಾದವರ ಗುರಿ (ಬಿಪಿಎಲ್ ನಿಂದ ಎಪಿಎಲ್ ಗೆ) |
|---|---|---|---|---|---|---|---|---|---|---|---|---|---|
| | | ಆರ್ಥಿಕ ಗುರಿ (ರೂ.ಲಕ್ಷ ಗಳಲ್ಲಿ) | ಭೌತಿಕ ಗುರಿ (ಎಸ್‌ಹೆಚ್‌ಜಿಸ್) | ಆರ್ಥಿಕ ಗುರಿ (ರೂ.ಲಕ್ಷ ಗಳಲ್ಲಿ) | ಭೌತಿಕ ಗುರಿ (ಸ್ವರೋಜ್ ಗಾರಿಗಳು) | | ಗ್ರೇಡ್–1 ಗುರಿ | ಗ್ರೇಡ್–2 ಗುರಿ | | ಒಟ್ಟು ಗುರಿ | (ಪ್ರತಿ ತಾಲ್ಲೂಕಿಗೆ ಒಂದರಂತೆ) | (ಪ್ರತಿ ಹೋಬಳಿಗೆ ಮೂರರಂತೆ) | |
| 1 | ಬಾಗಲಕೋಟೆ | 13.63 | 136 | 13.63 | 975 | 157 | 136 | 79 | 94 | 60 | 6 | 54 | 765 |
| 2 | ಬೆಂಗಳೂರು ಗ್ರಾ | 7.52 | 75 | 7.52 | 538 | 87 | 75 | 43 | 52 | 55 | 4 | 51 | 591 |
| 3 | ಬೆಂಗಳೂರು ನಗರ | 5.80 | 58 | 5.80 | 415 | 67 | 58 | 33 | 40 | 55 | 4 | 51 | 324 |
| 4 | ಬೆಳಗಾಂ | 40.29 | 403 | 40.29 | 2882 | 464 | 403 | 232 | 278 | 115 | 10 | 105 | 2270 |
| 5 | ಬಳ್ಳಾರಿ | 32.01 | 320 | 32.01 | 2290 | 369 | 320 | 184 | 221 | 88 | 7 | 81 | 1805 |
| 6 | ಬೀದರ್ | 22.69 | 227 | 22.69 | 1623 | 261 | 227 | 131 | 157 | 95 | 5 | 90 | 1279 |
| 7 | ಬಿಜಾಪುರ | 26.71 | 267 | 26.71 | 1910 | 308 | 267 | 154 | 185 | 59 | 5 | 54 | 1505 |
| 8 | ಚಾಮರಾಜನಗರ | 28.27 | 283 | 28.27 | 2022 | 326 | 283 | 163 | 195 | 52 | 4 | 48 | 1591 |
| 9 | ಚಿಕ್ಕಮಗಳೂರು | 12.84 | 128 | 12.84 | 918 | 148 | 128 | 74 | 89 | 103 | 7 | 96 | 722 |
| 10 | ಚಿಕ್ಕಬಳ್ಳಾಪುರ | 14.85 | 148 | 14.85 | 1062 | 171 | 148 | 86 | 103 | 90 | 6 | 84 | 971 |
| 11 | ಚಿತ್ರದುರ್ಗ | 22.80 | 228 | 22.80 | 1631 | 263 | 228 | 131 | 158 | 72 | 6 | 66 | 1285 |
| 12 | ದಕ್ಷಿಣ ಕನ್ನಡ | 12.39 | 124 | 12.39 | 886 | 143 | 124 | 71 | 86 | 56 | 5 | 51 | 698 |
| 13 | ದಾವಣಗೆರೆ | 18.41 | 184 | 18.41 | 1316 | 212 | 184 | 106 | 127 | 78 | 6 | 72 | 1034 |
| 14 | ಧಾರವಾಡ | 11.48 | 115 | 11.48 | 821 | 132 | 115 | 66 | 79 | 47 | 5 | 42 | 649 |
| 15 | ಗದಗ್ | 18.22 | 182 | 18.22 | 1303 | 210 | 182 | 105 | 126 | 38 | 5 | 33 | 1028 |
| 16 | ಗುಲ್ಬರ್ಗಾ | 22.90 | 229 | 22.90 | 1638 | 264 | 229 | 132 | 158 | 154 | 10 | 144 | 1310 |
| 17 | ಹಾಸನ | 16.64 | 166 | 16.64 | 1190 | 192 | 166 | 96 | 115 | 122 | 8 | 114 | 936 |
| 18 | ಹಾವೇರಿ | 19.90 | 199 | 19.90 | 1423 | 229 | 199 | 115 | 138 | 64 | 7 | 57 | 1120 |
| 19 | ಕೊಡಗು | 4.68 | 47 | 4.68 | 334 | 54 | 47 | 27 | 32 | 51 | 3 | 48 | 263 |
| 20 | ಕೋಲಾರ | 16.78 | 168 | 16.78 | 1200 | 193 | 168 | 97 | 116 | 80 | 5 | 75 | 809 |
| 21 | ಕೊಪ್ಪಳ | 28.63 | 286 | 28.63 | 2048 | 330 | 286 | 165 | 198 | 64 | 4 | 60 | 1615 |
| 22 | ಮಂಡ್ಯ | 21.66 | 217 | 21.66 | 1549 | 249 | 217 | 125 | 150 | 100 | 7 | 93 | 1217 |
| 23 | ಮೈಸೂರು | 26.39 | 264 | 26.39 | 1888 | 304 | 264 | 152 | 182 | 106 | 7 | 99 | 1487 |
| 24 | ರಾಯಚೂರು | 26.96 | 270 | 26.96 | 1928 | 311 | 270 | 155 | 186 | 116 | 5 | 111 | 1517 |
| 25 | ರಾಮನಗರ | 13.47 | 135 | 13.47 | 963 | 155 | 135 | 78 | 93 | 58 | 4 | 54 | 590 |
| 26 | ಶಿವಮೊಗ್ಗ | 22.94 | 229 | 22.94 | 1640 | 264 | 229 | 132 | 159 | 127 | 7 | 120 | 1291 |
| 27 | ತುಮಕೂರು | 34.00 | 340 | 34.00 | 2431 | 292 | 340 | 196 | 235 | 160 | 10 | 150 | 1915 |
| 28 | ಉಡುಪಿ | 10.09 | 101 | 10.09 | 722 | 116 | 101 | 58 | 70 | 30 | 3 | 27 | 569 |
| 29 | ಉತ್ತರ ಕನ್ನಡ | 14.30 | 143 | 14.30 | 1023 | 165 | 143 | 82 | 99 | 116 | 11 | 105 | 808 |
| 30 | ಯಾದಗಿರಿ | 10.29 | 103 | 10.29 | 736 | 119 | 103 | 59 | 71 | 116 | 11 | 105 | 561 |
| | | 577.53 | 5775 | 577.53 | 41305 | 6653 | 5775 | 3327 | 3992 | 2411 | 176 | 2235 | 32517 |

**ಅನುಬಂಧ–4**

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿಯಲ್ಲಿ 2011–12ನೇ ಸಾಲಿನಲ್ಲಿ ಹೈನುಗಾರಿಕೆ ಜೊತೆಗೆ ಗುರುತಿಸಿದ ಇತರೆ ಆರ್ಥಿಕ ಚಟುವಟಿಕೆಗಳು.**

| ಕ್ರಸಂ. | ಜಿಲ್ಲೆ | ಆರ್ಥಿಕ ಚಟುವಟಿಕೆಗಳು |
|---|---|---|
| 1 | ಬಾಗಲಕೋಟೆ | ಇಳಕಲ್ ಸೀರೆ ನೇಯ್ಗೆ |
| 2 | ಬೆಂಗಳೂರು (ನ) | ಕೋಳಿ ಸಾಕಾಣಿಕೆ |
| | | ಪುಷ್ಪೋದ್ಯಮ ಮತ್ತು ಅಣಬೆ ಬೇಸಾಯ |
| | | ಕುಂಬಾರಿಕೆ |
| | | ಆಹಾರ ಉತ್ಪನ್ನ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ನೇಯ್ಗೆ |
| | | ಕೈಮಗ್ಗ |
| 3 | ಬೆಂಗಳೂರು (ಗ್ರಾ) | ಪುಷ್ಪೋದ್ಯಮ |
| | | ರೇಷ್ಮೆ, ರೇಷ್ಮೆ ನೇಯ್ಗೆ |
| | | ಪ್ಲಾಸ್ಟಿಕ್ ಹೂ |
| | | ಸಿದ್ಧ ಉಡುಪು |
| | | ಗೊಂಬೆ ತಯಾರಿಕೆ |
| | | ಕುಂಬಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಕಾಂಡಿಮೆಂಟ್ಸ್ ಮತ್ತು ಸಂಚಾರಿ ಉಪಾಹಾರ |
| 4 | ಬಳ್ಳಾರಿ | ಹಪ್ಪಳ ತಯಾರಿಕೆ |
| | | ಲಂಬಾಣಿ ಉಡುಪು |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಬಾಳೆ ನಾರಿನ ಉತ್ಪನ್ನ |
| | | ಕಲ್ಲು ಕೆತ್ತನೆ |
| 5 | ಬೆಳಗಾಂ | ಕೊಲ್ಲಾಪುರಿ ಚಪ್ಪಲಿಗಳು |
| | | ಸೆಣಬಿನ ಉತ್ಪನ್ನಗಳು |
| | | ಕುಂಬಾರಿಕೆ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| 6 | ಬೀದರ್ | ಬಿದರಿವೇರ್ |
| | | ಗಂಧದ ಮತ್ತು ಕರಕುಶಲ ವಸ್ತುಗಳ ತಯಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| 7 | ಬಿಜಾಪುರ | ಕತ್ತಾಳೆ ಉತ್ಪನ್ನಗಳು |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಗನ್ನಿ ಬ್ಯಾಗ್ |
| 8 | ಚಾಮರಾಜನಗರ | ಸೀಸಲ್ ಫೈಬರ್ ಕ್ರಾಫ್ಟ್ |
| | | ತೆಂಗಿನ ನಾರಿನ ಉತ್ಪನ್ನ |
| | | ಕೈ ಕಸೂತಿ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| 9 | ಚಿತ್ರದುರ್ಗ | ಮೊಳಕಾಲ್ಮೂರು ಸೀರೆ (ರೇಷ್ಮೆ) |
| | | ಬಾಳೆ ನಾರಿನ ವಸ್ತುಗಳ ತಯಾರಿಕೆ |
| | | ಕಂಬಳಿ ನೇಯ್ಗೆ |
| | | ತೆಂಗಿನ ನಾರಿನ ಉತ್ಪನ್ನ |
| | | ತರಕಾರಿ, ಹಣ್ಣು ಮತ್ತು ಹೂವು ಶೈತ್ಯಾಗಾರ |
| | | ತೆಂಗಿನ ಪೊರಕೆ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| 10 | ಚಿಕ್ಕಮಗಳೂರು | ಜೇನು ಸಾಕಾಣಿಕೆ |

| | | |
|---|---|---|
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಗುಡಿ ಕೈಗಾರಿಕೆ |
| 11 | ಚಿಕ್ಕಬಳ್ಳಾಪುರ | ಸಾಮುದಾಯಿಕ ಕೃಷಿ ತೋಟಗಾರಿಕೆ |
| | | ಹುಣಸೆ ಸಂಸ್ಕರಣಾ ಘಟಕ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಬಯೋ ಫರ್ಟಿಲೈಸರ್ಸ್ – ಗೊಬ್ಬರ ಉತ್ಪನ್ನಗಳು |
| | | ನೀರು ಪರೀಕ್ಷಾ ಘಟಕ |
| | | ಮಾರ್ಜಾಕ |
| | | ಪೌಷ್ಠಿಕ ಆಹಾರ |
| 12 | ಧಾರವಾಡ | ಕಸೂತಿ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| 13 | ದಾವಣಗೆರೆ | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಅಗರಬತ್ತಿ |
| 14 | ದಕ್ಷಿಣ ಕನ್ನಡ | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಬಲೆ ನೇಯ್ಗೆ |
| | | ಸಿದ್ಧ ಉಡುಪು ತಯಾರಿಕೆ |
| | | ಫಿನಾಯಿಲ್, ಮಾರ್ಜಕ ತಯಾರಿಕೆ ಮತ್ತು ಸಿದ್ಧ ಉಡುಪು |
| | | ಮೊಲ ಸಾಕಾಣಿಕೆ |
| 15 | ಗದಗ್ | ನೇಯ್ಗೆ |
| | | ಬಡಗಿ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಪುಷ್ಪೋದ್ಯಮ |
| 16 | ಗುಲ್ಬರ್ಗ | ರೇಷ್ಮೆ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| 17 | ಹಾಸನ | ಕಾಫಿ ಕಾಂಡದ ವಿವಿಧ ರೀತಿಯ ಗೃಹಲಂಕಾರ ವಸ್ತುಗಳು |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಕುಂಬಾರಿಕೆ |
| 18 | ಹಾವೇರಿ | ಕುಂಬಾರಿಕೆ |
| | | ನೇಯ್ಗೆ |
| | | ಕಂಬಳಿ ನೇಯ್ಗೆ |
| | | ಆಹಾರ (ಶ್ಯಾವಿಗೆ) |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಅಗರಬತ್ತಿ |
| 19 | ಕೊಡಗು | ಔಷಧ ಮತ್ತು ಸುಗಂಧ ಸಸ್ಯಗಳು, ಜೇನು ಸಾಕಾಣಿಕೆ |
| | | ಫ್ಯಾಶನ್ ಡಿಸೈನ್ |
| | | ಪುಷ್ಪೋದ್ಯಮ |
| | | ಎರೆಹುಳು ಗೊಬ್ಬರ ತಯಾರಿಕೆ |
| 20 | ಕೋಲಾರ | ಸಾಮುದಾಯಿಕ ಕೃಷಿ ತೋಟಗಾರಿಕೆ |
| | | ಹುಣಸೆ ಸಂಸ್ಕರಣಾ ಘಟಕ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಬಯೋ ಫರ್ಟಿಲೈಸರ್ಸ್ – ಗೊಬ್ಬರ ಉತ್ಪನ್ನಗಳು |
| | | ನೀರು ಪರೀಕ್ಷಾಘಟಕ |
| | | ಮಾರ್ಜಾಕ |
| | | ಪೌಷ್ಠಿಕ ಆಹಾರ |

| | | |
|---|---|---|
| 21 | ಕೊಪ್ಪಳ | ಕಿನ್ನಾಳಗೊಂಬೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| 22 | ಮೈಸೂರು | ಮೆಣಸಿನಕಾಯಿಪುಡಿ |
| | | ಅಗರಬತ್ತಿ |
| | | ಕುಂಬಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಕಸೂತಿ |
| 23 | ಮಂಡ್ಯ | ವಿದ್ಯುತ್ ಮಗ್ಗ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಕೈಮಗ್ಗ, ವಿದ್ಯುತ್ ಮಗ್ಗ |
| | | ಕೈಮಗ್ಗ |
| 24 | ರಾಯಚೂರು | ರೇಷ್ಮೆ ಹೂವಿನ ಹಾರ ತಯಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಅಗರಬತ್ತಿ |
| | | ಫ್ಯಾಶನ್ ಡಿಸೈನ್ |
| 25 | ರಾಮನಗರ | ಪುಷ್ಪೋದ್ಯಮ |
| | | ರೇಷ್ಮೆ |
| | | ಪ್ಲಾಸ್ಟಿಕ್ ಹೂ |
| | | ಸಿದ್ಧ ಉಡುಪು |
| | | ಗೊಂಬೆ ತಯಾರಿಕೆ |
| | | ಕುಂಬಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಕಾಂಡಿಮೆಂಟ್ಸ್ ಮತ್ತು ಸಂಚಾರಿ ಉಪಹಾರ |
| | | ರೇಷ್ಮೆ ನೇಯ್ಗೆ |
| 26 | ಶಿವಮೊಗ್ಗ | ಲಾವಂಚ ಎಣ್ಣೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| 27 | ತುಮಕೂರು | ರೇಷ್ಮೆ ನೇಯ್ಗೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ನಾರಿನ ಉತ್ಪನ್ನಗಳು |
| | | ಉಣ್ಣೆ ನೇಯ್ಗೆ |
| 28 | ಉತ್ತರ ಕನ್ನಡ | ಕುಂಬಾರಿಕೆ |
| | | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಬಿದರು ಉತ್ಪನ್ನ |
| 29 | ಉಡುಪಿ | ಎರೆಹುಳು ಗೊಬ್ಬರ ತಯಾರಿಕೆ |
| | | ಫ್ಯಾಶನ್ ಡಿಸೈನ್ |
| | | ಟೆರಾಕೋಟ |
| 30 | ಯಾದಗಿರಿ | ರೇಷ್ಮೆ |
| | | ಫ್ಯಾಶನ್ ಡಿಸೈನ್ |
| | | ಎರೆಹುಳು ಗೊಬ್ಬರ ತಯಾರಿಕೆ |

## ಅನುಬಂಧ–5

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ 2011–12ನೇ ಸಾಲಿನಲ್ಲಿ ನಿಗದಿಪಡಿಸಿದ ಚಟುವಟಿಕೆಗಳು ಗುರಿ (ಅರ್ಧ ವಾರ್ಷಿಕ)**

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಚಟುವಟಿಕೆಗಳು | | | |
|---|---|---|---|---|---|
| | | ಪ್ರೈಮರಿ (ಶೇ. 70) | | ಸೆಕೆಂಡರಿ ಮತ್ತು ಟರ್ಶಿಯರಿ (ಶೇ. 30) | |
| | | ಹೈನುಗಾರಿಕೆ, ಕುರಿ ಕೋಳಿ, ಹಂದಿ ಸಾಕಾಣಿಕೆಗಳು (ಶೇ. 60 ರಷ್ಟು) | ನೀರಾವರಿ ಮತ್ತು ಭೂಆಧಾರಿತ ಚಟುವಟಿಕೆ (ಶೇ. 10 ರಷ್ಟು) | ಜಿಲ್ಲೆಯಲ್ಲಿನ ಪ್ರಮುಖ ಸೆಕೆಂಡರಿ ಮತ್ತು ಟರ್ಶಿಯರಿ ಚಟುವಟಿಕೆಗಳಿಗೆ | ಒಟ್ಟು |
| 1 | 2 | 3 | 4 | 5 | 6 |
| 1 | ಬಾಗಲಕೋಟೆ | 47 | 8 | 24 | 79 |
| 2 | ಬೆಂಗಳೂರು ಗ್ರಾ | 26 | 4 | 13 | 43 |
| 3 | ಬೆಂಗಳೂರು ನಗರ | 20 | 3 | 10 | 33 |
| 4 | ಬೆಳಗಾಂ | 139 | 23 | 70 | 232 |
| 5 | ಬಳ್ಳಾರಿ | 110 | 18 | 55 | 184 |
| 6 | ಬೀದರ್ | 79 | 13 | 39 | 131 |
| 7 | ಬಿಜಾಪುರ | 92 | 15 | 46 | 154 |
| 8 | ಚಾಮರಾಜನಗರ | 98 | 16 | 49 | 163 |
| 9 | ಚಿಕ್ಕಮಗಳೂರು | 44 | 7 | 22 | 74 |
| 10 | ಚಿಕ್ಕಬಳ್ಳಾಪುರ | 52 | 9 | 26 | 86 |
| 11 | ಚಿತ್ರದುರ್ಗ | 79 | 13 | 39 | 131 |
| 12 | ದಕ್ಷಿಣ ಕನ್ನಡ | 43 | 7 | 21 | 71 |
| 13 | ದಾವಣಗೆರೆ | 64 | 11 | 32 | 106 |
| 14 | ಧಾರವಾಡ | 40 | 7 | 20 | 66 |
| 15 | ಗದಗ್ | 63 | 11 | 32 | 105 |
| 16 | ಗುಲ್ಬರ್ಗಾ | 79 | 13 | 40 | 132 |
| 17 | ಹಾಸನ | 58 | 10 | 29 | 96 |
| 18 | ಹಾವೇರಿ | 69 | 12 | 35 | 115 |
| 19 | ಕೊಡಗು | 16 | 3 | 8 | 27 |
| 20 | ಕೋಲಾರ | 58 | 10 | 29 | 97 |
| 21 | ಕೊಪ್ಪಳ | 99 | 17 | 50 | 165 |
| 22 | ಮಂಡ್ಯ | 75 | 13 | 38 | 125 |
| 23 | ಮೈಸೂರು | 91 | 15 | 46 | 152 |
| 24 | ರಾಯಚೂರು | 93 | 16 | 47 | 155 |
| 25 | ರಾಮನಗರ | 47 | 8 | 23 | 78 |
| 26 | ಶಿವಮೊಗ್ಗ | 79 | 13 | 40 | 132 |
| 27 | ತುಮಕೂರು | 118 | 20 | 59 | 196 |
| 28 | ಉಡುಪಿ | 35 | 6 | 17 | 58 |
| 29 | ಉತ್ತರ ಕನ್ನಡ | 49 | 8 | 25 | 82 |
| 30 | ಯಾದಗಿರಿ | 35 | 6 | 18 | 59 |
| | **ಒಟ್ಟು :** | **1996** | **333** | **998** | **3327** |

## ಅನುಬಂಧ-6

### ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಲ್ಲಿ 2011-12ನೇ ಸಾಲಿಗೆ ಗುರುತಿಸಿದ ತರಬೇತಿ ಸಂಸ್ಥೆಗಳು ಮತು ವಿಳಾಸ

| ಕ್ರ.ಸಂ. | ಜಿಲ್ಲೆಯ ಹೆಸರು | ತರಬೇತಿ ಸಂಸ್ಥೆಗಳ ಹೆಸರು ಮತ್ತು ವಿಳಾಸ |
|---|---|---|
| 1 | ಬಾಗಲಕೋಟೆ | 1) ಬಿ.ವಿ.ವಿ. ಸಂಘ ಇಂಗ್-ವೈಶ್ಯ ಬ್ಯಾಂಕ್ ರೂಡ್ ಸೆಟ್ ಸಂಸ್ಥೆ, ಬಿವಿವಿ. ಸಂಘ ಕ್ಯಾಂಪಸ್, ಬಸ್ ನಿಲ್ದಾಣ ರಸ್ತೆ ಹತ್ತಿರ, ಬಾಗಲಕೋಟೆ-587 101 |
| 2 | ಬೆಂಗಳೂರು (ಗ್ರಾ) | 2) ಕೆನರಾ ಬ್ಯಾಂಕ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಫಾರ್ ಮೈಕ್ರೋ ಫೈನಾನ್ಸ್ (ಸಿಬಿಟಿಐಎಂಎಫ್) ಸೊಣ್ಣಹಳ್ಳಿಪುರ, ಹಸಿಗಾಲ ಅಂಚೆ, ಹೊಸಕೋಟೆ ತಾಲ್ಲೂಕು, ಸೊಣ್ಣಹಳ್ಳಿಪುರ, 562114 ಬೆಂಗಳೂರು ಗ್ರಾಮಾಂತರ. |
| | | 3) ರೂಡ್‌ಸೆಟ್ ಸಂಸ್ಥೆ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು-562123, ಬೆಂಗಳೂರು (ಗ್ರಾ) ಜಿಲ್ಲೆ. |
| **3** | ಬೆಳಗಾಂ | 4) ಸಿಂಡಿಕೇಟ್ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಎಂಟರ್‌ಪ್ರಿನರಶಿಪ್ ಡೆವಲಪ್‌ಮೆಂಟ್ (ಎಸ್‌ಐಆರ್‌ಡಿ), 1561, ಸಿಂಡಿಕೇಟ್ ಬ್ಯಾಂಕ್, 2ನೇ ಮಹಡಿ, ಮಾರುತಿಗಲ್ಲಿ, ಬೆಳಗಾಂ-590001. |
| **4** | ಬಳ್ಳಾರಿ | 5) ಸಿಂಡಿಕೇಟ್ ರೂರಲ್ ಇನ್‌ಸ್ಟಿಟ್ಯೂಟ್ ಪಾರ್ ಎಂಟರ್‌ಪ್ರಿನರಶಿಪ್ ಡೆವಲಪ್‌ಮೆಂಟ್ (ಎಸ್‌ಐಆರ್‌ಡಿ), ಡಿ..ಐ.ಟಿ. ಕಾಂಪೌಂಡ್, ಹೊಸಪೇಟೆ ರಸ್ತೆ, ಬಳ್ಳಾರಿ-583102 |
| **5** | ಬೀದರ | 6) ಶಾರದಾ ರೂಡ್‌ಸೆಟ್ ಇನ್‌ಸ್ಟಿಟ್ಯೂಟ್, ಪ್ರತಾಪ್ ನಗರ, ಉದಗಿರಿ ರಸ್ತೆ, ಬೀದರ್-585402 |
| **6** | ಬಿಜಾಪುರ | 7) ರೂಡ್‌ಸೆಟ್ ಸಂಸ್ಥೆ, ಪಿ.ಬಿ.ನಂ. 12, ಪೆರೂರು ಕಾಲೋನಿ, ಬಿಜಾಪುರ-586 101 |
| **7** | ಚಾಮರಾಜನಗರ | 8) ಜೆ.ಎಸ್.ಎಸ್. ರೂಡ್‌ಸೆಟ್ ಸಂಸ್ಥೆ, ಮರಿಯಾಳ, ಚಾಮರಾಜನಗರ-571 313 |
| **8** | ಚಿಕ್ಕಬಳ್ಳಾಪುರ | 9) ಕೆನರಾ ಬ್ಯಾಂಕ್ ಆರ್‌ಸಿಟಿ, ಸಾಮರ್ಥ್ಯಸೌಧ, ಬಿಡಿಓ ಕ್ವಾರ್ಟರ್ಸ್, ವಾಪಸಂದ್ರ, ಬಡಾವಣೆ, ಬಿಬಿ ರಸ್ತೆ, ಚಿಕ್ಕಬಳ್ಳಾಪುರ |
| **9** | ಚಿಕ್ಕಮಗಳೂರು | 10) ಕಾರ್ಪೋರೇಷನ್ ಬ್ಯಾಂಕ್, ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಕಡೂರು ರಸ್ತೆ, ಚಿಕ್ಕಮಗಳೂರು-577 102 |
| **10** | ಚಿತ್ರದುರ್ಗ | 11) ರೂಡ್‌ಸೆಟ್ ಸಂಸ್ಥೆ, ಬನಶಂಕರಿ ಲೇ ಔಟ್, ಎನ್‌ಹೆಚ್-4, ಹೌಸಿಂಗ್ ಬೋರ್ಡ್ ಕಾಲೋನಿ ಹಿಂಭಾಗ, ಕೆಳಕೋಟೆ, ಚಿತ್ರದುರ್ಗ-577 501 |
| **11** | ಧಾರವಾಡ | 12) ರೂಡ್‌ಸೆಟ್ ಸಂಸ್ಥೆ, ಗಾಂಧಿನಗರ, ಧಾರವಾಡ-580 004 |
| **12** | ದಾವಣಗೆರೆ | 13) ಕೆನರಾ ಬ್ಯಾಂಕ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ದಾವಣಗೆರೆ |
| **13** | ದಕ್ಷಿಣಕನ್ನಡ | 14) ರೂಡ್‌ಸೆಟ್ ಸಂಸ್ಥೆ, ಸಿದ್ಧವನ, ಉಜಿರೆ-574 020, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ |
| **14** | ಗದಗ | 15) ಗದಗ ಇನ್‌ಸ್ಟಿಟ್ಯೂಟ್ ಫಾರ್ ಟ್ರೈನಿಂಗ್ ಇನ್ ಸೆಲ್ಫ್ ಎಂಪ್ಲಾಯಿಮೆಂಟ್ ಅಂಡ್ ರೂರಲ್ ಡೆವಲಪ್‌ಮೆಂಟ್ (ಜಿಐಟಿಎಸ್ಇಆರ್‌ಡಿ), ಕೆ.ಹೆಚ್.ಪಾಟೀಲ್ ಕೃಷಿ ವಿಜ್ಞಾನ ಕೇಂದ್ರ, ಕ್ಯಾಂಪಸ್ ಹುಲಕೋಟೆ, ಗದಗ್ ಜಿಲ್ಲೆ |
| **15** | ಗುಲ್ಬರ್ಗ | 16) ಕೃಷ್ಣ ಇನ್‌ಸ್ಟಿಟ್ಯೂಟ್ ಫಾರ್ ಟ್ರೈನಿಂಗ್ ಇನ್ ಸೆಲ್ಫ್ ಎಂಪ್ಲಾಯಿಮೆಂಟ್ ಅಂಡ್ ರೂರಲ್ (ಕೆಐಟಿಎಸ್ಇಆರ್‌ಡಿ) ನಂ. 35-4-501 3, ದರ್ಗಾ ರಸ್ತೆ ಸಂತ್ರಾಸವಾಡಿ, ಹಳೆ ಎಂಪ್ಲಾಯಿಮೆಂಟ್ ಕಛೇರಿ ಎದುರು, ಗುಲ್ಬರ್ಗ-585 101 |
| **16** | ಹಾಸನ | 17) ಕೆನರಾ ಬ್ಯಾಂಕ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಹಾಸನ |
| **17** | ಹಾವೇರಿ | 18) ವಿಜಯ ಬ್ಯಾಂಕ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ (ವಿಬ್‌ಸೆಟಿ) ಕೆ.ಎಸ್.ಎಫ್.ಸಿ. ಕಟ್ಟಡ ಮುಖ್ಯ ರಸ್ತೆ, ಹಾವೇರಿ-581 109 |
| **18** | ಕೊಡಗು | 19) ಕಾರ್ಪೋರೇಷನ್ ಬ್ಯಾಂಕ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, (COBSETI) ಮಡಕೇರಿ, ಕೊಡಗು |
| **19** | ಕೋಲಾರ | 20) ರೂರಲ್ ಇಂಡಸ್ಟ್ರೀಸ್ ಅಂಡ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, (ಆರ್‌ಸೆಟಿ), ಹೊನ್ನೇನಹಳ್ಳಿ-573 101 ಕೋಲಾರ ಜಿಲ್ಲೆ |
| **20** | ಕೊಪ್ಪಳ | 21) ರೂಡ್‌ಸೆಟಿ ಇನ್ಸಿಟಿಟ್ಯೂಟ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ಕೊಪ್ಪಳ |
| **21** | ಮೈಸೂರು | 22) ರೂಡ್‌ಸೆಟಿ ಸಂಸ್ಥೆ, ಮುಖ್ಯ ರಸ್ತೆ, ಹಿನಕಲ್, ಮೈಸೂರು-570 017 |

| | | |
|---|---|---|
| **22** | ಮಂಡ್ಯ | 23) ವಿಜಯಾಬ್ಯಾಂಕ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಮಂಡ್ಯ |
| **23** | ರಾಯಚೂರು | 24) ರೂಡ್‌ಸೆಟಿ ಇನ್‌ಸ್ಟಿಟ್ಯೂಟ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ರಾಯಚೂರು |
| **24** | ರಾಮನಗರ | 25) ಪೈಇನ್‌ಸ್ಟಿಟ್ಯೂಟ್ ಫಾರ್ ರೂರಲ್ ಡೆವಲಪ್‌ಮೆಂಟ್, ವಾಜರಹಳ್ಳಿ ರಾಮನಗರ |
| | | 26) ರೂರಲ್ ವುಮನ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ (ಆರ್‌ಡಬ್ಲ್ಯೂಎಸ್‌ಇಟಿಐ) ಹಾರೋಹಳ್ಳಿ, ಕನಕಪುರ ತಾಲ್ಲೂಕು ರಾಮನಗರ |
| **25** | ಶಿವಮೊಗ್ಗ | 27) ರೂರಲ್ ಇಂಡಸ್ಟ್ರೀಸ್ ಅಂಡ್ ರಿಸೋರ್ಸ್ ಗೈಡೆನ್ಸ್ ಸೆಲ್ (ಆರ್‌ಯುಪಿಆರ್‌ಇಜಿ) ಹೊಳಲೂರು, ಶಿವಮೊಗ್ಗ |
| **26** | ತುಮಕೂರು | 28) ಮೈಸೂರು ಬ್ಯಾಂಕ್ ಇನ್‌ಸ್ಟಿಟ್ಯೂಟ್ ಫಾರ್ ಪ್ರಮೋಷನ್ ಆಫ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಅಂಡ್ ಡೆವಲಪ್‌ಮೆಂಟ್ (ಮಿಪ್‌ಸೆಡ್) ಹಿರೇಹಳ್ಳಿ ಇಂಡಸ್ಟ್ರೀಯಲ್ ಏರಿಯಾ, ತುಮಕೂರು–572168 |
| **27** | ಉತ್ತರಕನ್ನಡ | 29) ಸಿಂಡಿಕೇಟ್ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಎಂಟರ್‌ಪ್ರಿನರ್‌ಶಿಪ್ ಡೆವಲಪ್‌ಮೆಂಟ್ (ಎಸ್‌ಐಆರ್‌ಡಿ) ಇಂಡಸ್ಟ್ರಿಯಲ್ ಎಸ್ಟೇಟ್, ಹೆಗಡೆ ರಸ್ತೆ, ರಘುನಾಥ್ ಬಿಲ್ಡಿಂಗ್, ಎನ್.ಹೆಚ್.17. |
| | | 30) ದೇಶಪಾಂಡೆ ರೂಡ್‌ಸೆಟ್ ಸಂಸ್ಥೆ, ದಾಂಡೇಲಿ ರೋಡ್, ಉದ್ಯೋಗ್ ವಿದ್ಯಾನಗರ, ಅಂಚೆ ಪೆಟ್ಟಿಗೆ ನಂ. 23, ಹಳಿಯಾಳ–581 329 ಉತ್ತರಕನ್ನಡ ಜಿಲ್ಲೆ |
| **28** | ಉಡುಪಿ | 31) ರೂಡ್‌ಸೆಟಿ ಸಂಸ್ಥೆ, 52– ಹೇರೂರ್, ಬ್ರಹ್ಮಾವರ, ಉಡುಪಿ–576 213 |
| | | 32) ಸಿಂಡಿಕೇಟ್ ಇನ್ಸಿಟಿಟ್ಯೂಟ್ ಆಫ್ ರೂರಲ್ ಎಂಟರ್‌ಪ್ರೈಸಸ್ ಡೆವಲಪ್‌ಮೆಂಟ್ (ಎಸ್‌ಐಆರ್‌ಡಿ), ಸಿಂಡಿಕೇಟ್ ಬ್ಯಾಂಕ್, 1ನೇ ಮಹಡಿ, ಸಿಂಡಿಕೇಟ್ ಶಾಖೆ, ಮಣಿಪಾಲ್–576119 ಉಡುಪಿ ಜಿಲ್ಲೆ |

**ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್ (ಎಟಿಡಿಸಿ ತರಬೇತಿ ಕೇಂದ್ರಗಳು)**

| | | |
|---|---|---|
| 1 | ಬಾಗಲಕೋಟೆ | 1) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ |
| 2 | ಬೆಂಗಳೂರು (ಗ್ರಾ) | 2) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ರೂಡ್‌ಸೆಟಿ ಇನ್ಸಟಿಟ್ಯೂಟ್, ಅರಶಿನಕುಂಟೆ, ಬೆಂಗಳೂರು ತಾಲ್ಲೂಕು ಮತ್ತು ಜಿಲ್ಲೆ |
| 3 | ಬಳ್ಳಾರಿ | 3) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ |
| 4 | ಬೆಳಗಾವಿ | 4) ಗಾರ್ಮೆಂಟ್ ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಸಹಕಾರ ಶಿಕ್ಷಣ ಮತ್ತು ಸಮಾಜ ಸೇವಾ ಸಂಸ್ಥೆ, ಶಿರ್ಪೆವಾಡಿ ಗ್ರಾಮ, ಯಕ್ಸಾಂಬಾ, ಚಿಕ್ಕೋಡಿ ತಾಲ್ಲೂಕು ಬೆಳಗಾವಿ |
| 5 | ಬೀದರ್ | 5) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಶಾರದಾ ರೂಡ್‌ಸೆಟಿ, ಬೀದರ್ |
| 6 | ಬಿಜಾಪುರ | 6) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ರೂಡ್‌ಸೆಟಿ, ಬಿಜಾಪುರ |
| 7 | ಚಿಕ್ಕಮಗಳೂರು | 7) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಅರ್ಜುನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಚಿಕ್ಕಮಗಳೂರು |
| 8 | ಚಿಕ್ಕಬಳ್ಳಾಪುರ | 8) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಎಟಿಐ ಕಟ್ಟಡ, ಚಿಕ್ಕಬಳ್ಳಾಪುರ |
| 9 | ಚಿತ್ರದುರ್ಗ | 9) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ರೂಡ್‌ಸೆಟಿ, ಚಿತ್ರದುರ್ಗ |
| 10 | ದಾವಣಗೆರೆ | 10) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ತರಳಬಾಳು ಫೌಂಡೇಷನ್, ಚೆನ್ನಗಿರಿ, ದಾವಣಗೆರೆ |
| 11 | ಧಾರವಾಡ | 11) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಎಟಿಐ, ಕಟ್ಟಡ, ಹುಬ್ಬಳ್ಳಿ, ಧಾರವಾಡ ಜಿಲ್ಲೆ |
| 12 | ಗದಗ್ | 12) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಗದಗ್ |
| 13 | ಗುಲ್ಬರ್ಗ | 13) ಕೃಷ್ಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ, ಗುಲ್ಬರ್ಗ |
| 14 | ಹಾವೇರಿ | 14) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಕುಮಾರೇಶ್ವರ ಟ್ರಸ್ಟ್, ಹಾನಗಲ್, ಹಾವೇರಿ ಜಿಲ್ಲೆ |
| 15 | ಕೋಲಾರ | 15) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ತಾಲ್ಲೂಕು ಪಂಚಾಯತಿ ಕಛೇರಿಯ ಹತ್ತಿರ, ಕೋಲಾರ |

| | | |
|---|---|---|
| 16 | ಕೊಪ್ಪಳ | 16) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಹೆಚ್‌ಬಿಹೆಚ್‌ಆರ್‌ಐಸಿಟಿ, ರೂಡ್‌ಸೆಟಿ, ಕೊಪ್ಪಳ |
| 17 | ಮೈಸೂರು | 17) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಜೆಎಸ್‌ಎಸ್ ವಿದ್ಯಾಪೀಠ, ಕೆಆರ್‌ಎಸ್ ರಸ್ತೆ, ಮೈಸೂರು |
| 18 | ಮಂಡ್ಯ | 18) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಎಪಿಎಂಸಿ ಯಾರ್ಡ್, ಮದ್ದೂರು |
| 19 | ರಾಯಚೂರು | 19) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಎಸ್‌ಎಲ್‌ಎನ್ ಟೆಕ್ನಿಕಲ್ ಇನ್ಸಿಟಿಟ್ಯೂಟ್, ಯರಮರಸ್, ರಾಯಚೂರು |
| 20 | ಶಿವಮೊಗ್ಗ | 20) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಇಂಡಸ್ಟ್ರೀಯಲ್ ಅಸೋಸಿಯೇಷನ್, ಡಿಐಸಿ ಕಟ್ಟಡ, ನೆಹರೂ ರಸ್ತೆ, ಶಿವಮೊಗ್ಗ |
| | | 21) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ |
| | | 22) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ಮಹಾತ್ಮಗಾಂಧಿ ವಿದ್ಯಾಪೀಠ (ನೋಂ), ಅನವಳ್ಳಿ, ಸೊರಬ, ಶಿವಮೊಗ್ಗ |
| 21 | ತುಮಕೂರು | 23) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ಎಟಿಐ ಕಟ್ಟಡ, ಬಸ್ ನಿಲ್ದಾಣದ ಎದುರು, ತುಮಕೂರು |
| 22 | ರಾಮನಗರ | 24) ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್, ರಾಮನಗರ |
| 23 | ಉತ್ತರ ಕನ್ನಡ | 25) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್ ದೇಶಪಾಂಡೆ ರೂಡ್‌ಸೆಟಿ, ಹಳಿಯಾಳ, ಉತ್ತರ ಕನ್ನಡ |
| 24 | ಉಡುಪಿ | 26) ಅಪೆರಲ್ ಟ್ರೈನಿಂಗ್ ಮತ್ತು ಪ್ರೊಡಕ್ಷನ್ ಸೆಂಟರ್, ರೂಡ್‌ಸೆಟಿ, ಬ್ರಹ್ಮಾವರ, ಉಡುಪಿ |

**ಕರ್ನಾಟಕ ಕೃಷಿ ವಿಜ್ಞಾನ ಕೇಂದ್ರಗಳು**

| | | |
|---|---|---|
| 1 | ಬಳ್ಳಾರಿ | 1) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಹಗರಿ, ಬಳ್ಳಾರಿ ಜಿಲ್ಲೆ–583138 |
| 2 | ಬೆಳಗಾಂ | 2) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ತುಕನತ್ತಿ ತಾಲ್–ಗೋಕಾಕ್ ಬೆಳಗಾಂ–591 224 |
| 3 | ಬೀದರ್ | 3) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ನಂ. 58, ಜನವಾಡ, ಬೀದರ್–580 005 |
| 4 | ಬಿಜಾಪುರ | 4) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಕೃಷಿ ಸಂಶೋಧನಾ ಸಂಸ್ಥೆ, ನಂ. 18, ಬಿಜಾಪುರ–586101 |
| 5 | ಚಾಮರಾಜನಗರ | 5) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಸೀಡ್ ಫಾರಂ, ಹರಡನಹಳ್ಳಿ ಚಾಮರಾಜನಗರ ಜಿಲ್ಲೆ–571 313 |
| 6 | ಚಿತ್ರದುರ್ಗ | 6) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಬಾಬ್ಬುರ್ ಫಾರಂ ಹಿರಿಯೂರು–572 143, ಚಿತ್ರದುರ್ಗ ಜಿಲ್ಲೆ |
| 7 | ಚಿಕ್ಕಮಗಳೂರು | 7) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಕೃಷಿ ಸಂಶೋಧನಾ ಸಂಸ್ಥೆ, ಮೂಡಿಗೆರೆ, ಚಿಕ್ಕಮಗಳೂರು–577132 |
| 8 | ದಕ್ಷಿಣ ಕನ್ನಡ | 8) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಕೃಷಿ ಸಂಶೋಧನಾ ಕೇಂದ್ರ, ದಕ್ಷಿಣ ಕನ್ನಡ, ಕನಕನಾಡ, ಮಂಗಳೂರು–575 002 |
| 9 | ಧಾರವಾಡ | 9) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಸಿದ್ದಾಪೂರ್ ಫಾರಂ, ಧಾರವಾಡ–580 003 |
| 10 | ದಾವಣಗೆರೆ | 10) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಅನುಭವ, ಮಂಟಪ, ಪಿ.ಬಿ.ನಂ. 303, ದಾವಣಗೆರೆ–577 004 |
| 11 | ಗದಗ | 11) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಹುಲಕೋಟಿ ಗದಗ ಜಿಲ್ಲೆ–582205 |
| 12 | ಗುಲ್ಬರ್ಗ | 12) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಕೃಷಿ ಸಂಶೋಧನಾ ಕೇಂದ್ರ ಅಲಂದ್ ರೋಡ್ ಗುಲ್ಬರ್ಗ–585 101 |
| 13 | ಹಾಸನ | 13) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಕಂದಲಿ, ಹಾಸನ–573217 |

| | | |
|---|---|---|
| 14 | ಹಾವೇರಿ | 14) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಹೆಮನಹಟ್ಟಿ, ರಾಣಿಬೆನ್ನೂರು, ಹಾವೇರಿ ಜಿಲ್ಲೆ–581 135 |
| 15 | ಕೊಪ್ಪಳ | 15) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಎ.ಆರ್.ಎಸ್.ಕ್ಯಾಂಪಸ್ ಕನಕಗಿರಿ ರೋಡ್, ಗಂಗಾವತಿ, ಕೊಪ್ಪಳ–583 227 |
| 16 | ಕೊಡಗು | 16) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಗೋಣಿಕೊಪ್ಪಲ್, ಕೊಡಗು ಜಿಲ್ಲೆ–571213 |
| 17 | ಮಂಡ್ಯ | 17) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ವಿ.ಸಿ.ಫಾರಂ ಮಂಡ್ಯ ಜಿಲ್ಲೆ–571 405 |
| 18 | ಮೈಸೂರು | 18) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಸುತ್ತೂರು, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ–571 129 |
| 19 | ರಾಯಚೂರು | 19) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಪಿ.ಬಿ.ನಂ. 24 ರಾಯಚೂರು ಜಿಲ್ಲೆ |
| 20 | ಶಿವಮೊಗ್ಗ | 20) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಪಿ.ಬಿ.ನಂ. 126, ನವಿಲೆ ಶಿವಮೊಗ್ಗ ಜಿಲ್ಲೆ–577 204 |
| 21 | ತುಮಕೂರು | 21) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ತುಮಕೂರು ಜಿಲ್ಲೆ, ಕೋಣೆಹಳ್ಳಿ, ತಿಪಟೂರು–572 202 |
| 22 | ಉತ್ತರ ಕನ್ನಡ | 22) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಬನವಾಸಿ ರಸ್ತೆ, ಶಿರಸಿ–582401, ಉತ್ತರ ಕನ್ನಡ |
| 23 | ಉಡುಪಿ | 23) ತರಬೇತಿ ಸಂಘಟಕರು, ಕೃಷಿ ವಿಜ್ಞಾನ ಕೇಂದ್ರ, ಬ್ರಹ್ಮಾವರ–575 213 ಉಡುಪಿ ಜಿಲ್ಲೆ |

**ಕರ್ನಾಟಕ ಜನ ಶಿಕ್ಷಣ ಸಂಸ್ಥಾನ ಹೆಸರು ಮತ್ತು ವಿಳಾಸ**

| | |
|---|---|
| 1) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ ಸದ್ಗುರು ಬಿಲ್ಡಿಂಗ್, ದೋಬಿಘಾಟ್, ಉತ್ತರ ಕರ್ನಾಟಕ ತಾಲ್ಲೂಕು, ಕಾರವಾರ–581 301 | 2) ನಿರ್ದೇಶಕರು (ಐ.ಸಿ), ಜನ ಶಿಕ್ಷಣ ಸಂಸ್ಥಾನ, ಡಿ.ಟಿ.ಐ. ಕಾಂಪೌಂಡ್, ಮಿನಿ ವಿಧಾನಸೌಧ ಹತ್ತಿರ, ತುಮಕೂರು–572 101 |
| 3) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ, ಆಫೀಸ್ ಆಫ್ ದಿ ಪ್ರಿನ್ಸಿಪಾಲ್, ಬಿ.ವಿ.ವಿ.ಎಸ್. ಪಾಲಿಟೆಕ್ನಿಕ್ (ಆಟೋಮಾನಸ್) ಬಾಗಲಕೋಟೆ–587 101 | 4) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ 1ನೇ ಮೈನ್, 2ನೇ ಬ್ಲಾಕ್, 3ನೇ ಹಂತ, 7ನೇ ಕ್ರಾಸ್, ವಿನೋಬಾನಗರ, ಪೊಲೀಸ್ ಚೌಕಿ ಹತ್ತಿರ, ಶಿವಮೊಗ್ಗ–577 204 |
| 5) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ ನಂ. 1067, 1, ವಿ.ವಿ.ರಸ್ತೆ, ಮೈಸೂರು–570 004 | 6) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ 12–11–61, ಅರಬ್ ಮೊಹಲ್ಲಾ, ರಾಯಚೂರು–584 101 |
| 7) ನಿರ್ದೇಶಕರು, ಜನ ಶಿಕ್ಷಣ ಸಂಸ್ಥಾನ ಜೆ.ಎಸ್.ಎಸ್. ಇನ್ಸಿಟಿಟ್ಯೂಷನ್ ಕಾಂಪ್ಲೆಕ್ಸ್, 1ನೇ ಮುಖ್ಯ ರಸ್ತೆ, 38ನೇ ಕ್ರಾಸ್, ಕನಕಪುರ ರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು–560 008 | |

**ಸರ್ಕಾರದಿಂದ ಮಂಜೂರಾತಿ ಆಗಿರುವ ಇತರೆ ತರಬೇತಿ ಸಂಸ್ಥೆಗಳು**

| | |
|---|---|
| 1) ಸುಭೋದಿ ಗ್ರಾಮೀಣ ಸ್ವ ಉದ್ಯೋಗ ತರಬೇತಿ ಸಂಸ್ಥೆ ಸ್ಫೂರ್ತಿಧಾಮ, 9143, ಮಾಗಡಿ ಮುಖ್ಯ ರಸ್ತೆ, ಅಂಜನ ನಗರ, ಬಿಹಿಎಲ್ ಬಡಾವಣೆ ಎದುರು, ವಿಶ್ವನೀಡಂ ಅಂಚೆ, ಬೆಂಗಳೂರು–560 091 | 2) ಉನ್ನತಿ ಸೆಂಟರ್, ನಂ.1, ದೇವಸ್ಥಾನ ರಸ್ತೆ, ಸದಾನಂದನಗರ, ಎನ್‌ಜಿಇಎಫ್ ಲೇಔಟ್, ಬೆಂಗಳೂರು–560038 |
| 3) ಸ್ವಾಮಿ ವಿವೇಕಾನಂದ ಸಮಾಜ ಸೇವಾ ಸಂಸ್ಥೆ, ಸುತಗುಟ್ಟಿ, ಬೈಲಹೊಂಗಲ ತಾಲ್ಲೂಕು, ಬೆಳಗಾಂ ಜಿಲ್ಲೆ | |

**ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ವ್ಯಾಪ್ತಿಯಡಿ ತರಬೇತಿ ಸಂಸ್ಥೆಗಳು**

| | |
|---|---|
| 1) ಚಾಮರಾಜ ತಾಂತ್ರಿಕ ಸಂಸ್ಥೆ, ಮೈಸೂರು | 2) ಕುಶಲಕರ್ಮಿ ತರಬೇತಿ ಸಂಸ್ಥೆಗಳು (ಒಟ್ಟು 21) |

**ಡಾ: ಅಮಿತಾ ಪ್ರಸಾದ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1749

## ಸಹಕಾರ ಸಚಿವಾಲಯ

**ವಿಷಯ :** ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚನ್ನಪಟ್ಟಣ ಇದರ 2009–10ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಕುರಿತು.

**ಓದಲಾಗಿದೆ :**
1. ಶ್ರೀ ಸಿ.ಪಿ. ಯೋಗೇಶ್ವರ್, ಮಾನ್ಯ ಶಾಸಕರು, ಚನ್ನಪಟ್ಟಣ ವಿಧಾನಸಭಾ ಕ್ಷೇತ್ರ ಇವರ ಪತ್ರ ಸಂಖ್ಯೆ: ಸಸಸಿಕ/1457/11, ದಿನಾಂಕ: 08–06–2011.
2. ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚನ್ನಪಟ್ಟಣ ಇವರ ಪತ್ರ ಸಂಖ್ಯೆ: 285/2011–2012, ದಿನಾಂಕ: 30–05–2011 ಮತ್ತು 11–06–2011.

**ಪ್ರಸ್ತಾವನೆ:**

ಪಿಕಾರ್ಡ್ ಬ್ಯಾಂಕ್, ಚನ್ನಪಟ್ಟಣ ಇದರ 2009–10ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31–03–2011ರೊಳಗೆ ನಡೆಸಬೇಕಾಗಿದ್ದು, ಮಾನ್ಯ ಶಾಸಕರ ಕ್ಷೇತ್ರದಲ್ಲಿ ವಿಧಾನಸಭಾ ಉಪಚುನಾವಣೆ ಮತ್ತು ನೀತಿ ಸಂಹಿತೆ ಜಾರಿಯಾದ್ದರಿಂದ ವಾರ್ಷಿಕ ಮಹಾಸಭೆಯನ್ನು ಮುಂದೂಡಿದ್ದು ದಿನಾಂಕ: 29–05–2011 ರಂದು ಬ್ಯಾಂಕಿನ ಅಧ್ಯಕ್ಷರು ಅಕಾಲಿಕ ಮರಣ ಹೊಂದಿರುವುದರಿಂದ ಕಾರ್ಯಕ್ರಮ ನಡೆಸಲು ವಿಳಂಬವಾಗುತ್ತದೆಂದು ಹಾಗೂ ಬ್ಯಾಂಕಿನ ನೂತನ ಕಟ್ಟಡವನ್ನು ಪ್ರಾರಂಭಿಸಿದ್ದು 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮತ್ತು ಕಟ್ಟಡದ ಉದ್ಘಾಟನೆಯನ್ನು ಏಕಕಾಲದಲ್ಲಿ ನಡೆಸಲು ತೀರ್ಮಾನಿಸಿರುವುದರಿಂದ ಬ್ಯಾಂಕಿನ ಆರ್ಥಿಕ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡ ಸೆಪ್ಟೆಂಬರ್ 2011 ರೊಳಗೆ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಕಾಶ ನೀಡಿ ಆದೇಶ ಹೊರಡಿಸಬೇಕೆಂದು ಮೇಲೆ ಓದಲಾದ(1)ರ ಪತ್ರದಲ್ಲಿ ಮಾನ್ಯ ಶಾಸಕರು, ಮಾನ್ಯ ಸಹಕಾರ ಮತ್ತು ಕೃಷಿ ಮಾರುಕಟ್ಟೆ ಸಚಿವರಲ್ಲಿ ಕೋರಿರುತ್ತಾರೆ.

ಶ್ರಿ ಸಿ.ಪಿ. ಯೋಗೇಶ್ವರ್, ಮಾನ್ಯ ಶಾಸಕರು, ಚನ್ನಪಟ್ಟಣ ವಿಧಾನಸಭಾ ಕ್ಷೇತ್ರ ಇವರ ಪತ್ರ ಹಾಗೂ ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚನ್ನಪಟ್ಟಣ ಇವರು ಸಲ್ಲಿಸಿರುವ ಪತ್ರವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 113 ಸಿಎಲ್ಎಂ 2011, ಬೆಂಗಳೂರು, ದಿನಾಂಕ: 24–06–2011**

ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚನ್ನಪಟ್ಟಣ ಇದರ 2009–10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30–09–2011 ವರೆಗೆ ಕಾಲಾವಕಾಶ ನೀಡಲು ಅನುಮತಿಯನ್ನು ನೀಡಲಾಗಿದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2011ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿಆರ್.ನಂ. 1750

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತದ ದುಡಿಯುವ ಬಂಡವಾಳಕ್ಕಾಗಿ ಸರ್ಕಾರದಿಂದ ಆರ್ಥಿಕ ನೆರವು – 2011–12ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಹಣದ ಬಿಡುಗಡೆ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಇವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/ಡಿಒ/2011/08, ದಿನಾಂಕ: 16–06–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಇವರ ಪತ್ರದಲ್ಲಿ ಕಾರ್ಖಾನೆಯ ದುಡಿಯುವ ಬಂಡವಾಳದ ಸಲುವಾಗಿ 2011–12ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ರೂ. 1500.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 122 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ: 13–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ, ಮಂಡ್ಯ ಈ ಕಾರ್ಖಾನೆಗೆ 2011–12ನೇ ಸಾಲಿಗೆ ಕಾರ್ಖಾನೆಯ ದುಡಿಯುವ ಬಂಡವಾಳದ ಸಲುವಾಗಿ ಒದಗಿಸಲಾಗಿರುವ ರೂ. 1500.00 ಲಕ್ಷಗಳಲ್ಲಿ ಮೊದಲನೆ ಕಂತಾಗಿ ರೂ. 375.00 ಲಕ್ಷಗಳನ್ನು (ರೂಪಾಯಿ ಮುನ್ನೂರ ಎಪ್ಪತ್ತೈದು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ 4860–04–190–1–00 ರಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ವಾಕೈ 124/ಆಂಆಸ(1)2011, ದಿನಾಂಕ: 08–07–2011ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16–05–2008 ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಶಂಕರ ನಾಯಕ್. ಎಲ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿಆರ್.ನಂ. 1751

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ರೈತರ ಬಾಕಿ ಪಾವತಿಸಲು ಮತ್ತು ಯಂತ್ರೋಪಕರಣಗಳ ಬದಲಾವಣೆಗೆ ರೂ. 22.00 ಕೋಟಿಗಳ ಅಲ್ಪಾವಧಿ ಸಾಲ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಕ್ರಮ ಸಂಖ್ಯೆ: ಪಿ.ಎಸ್.ಎಸ್.ಕೆ/ಎಸ್.ಕೆ/435/2011–12, ದಿನಾಂಕ: 01–06–2011ರ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರ ಪತ್ರ.

**2.** ಕ್ರಮ ಸಂಖ್ಯೆ: ಡಿಎಸ್‌ಕೆ/ಎಫ್‌ಐಎನ್/16/2010–11, ದಿನಾಂಕ: 25–06–2011ರ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ಅಧ್ಯಕ್ಷರ ಪತ್ರದಲ್ಲಿ ಕಾರ್ಖಾನೆಯನ್ನು ಮುಂದಿನ ಹಂಗಾಮಿನ ಕಬ್ಬು ನುರಿತಕ್ಕೆ ಸಜ್ಜುಗೊಳಿಸಲು ಶುಚೀಕರಣ ಕೆಲಸ ಹಾಗೂ ಯಂತ್ರೋಪಕರಣಗಳು ಹಾಗೂ ಬಿಡಿ ಭಾಗಗಳನ್ನು ಖರೀದಿಸಲು ಅಂದಾಜು ರೂ. 8.08 ಕೋಟಿಗಳು ಬೇಕಾಗಿದ್ದು ಅಲ್ಪಾವಧಿ ಸಾಲದ ಅವಶ್ಯಕತೆ ಇರುತ್ತದೆ. ಕಾರ್ಖಾನೆಯಲ್ಲಿ ರೂ. 40.00 ಕೋಟಿಗಳ ಮೌಲ್ಯದ ಸಕ್ಕರೆ ದಾಸ್ತಾನು ಇದ್ದರೂ ಸಹ ಕೇಂದ್ರ ಸರ್ಕಾರವು ಮುಕ್ತ ಮಾರುಕಟ್ಟೆ ಸಕ್ಕರೆಯನ್ನು ಮಾರಾಟ ಮಾಡಲು ಸಕಾಲದಲ್ಲಿ ಸಕ್ಕರೆ ಬಿಡುಗಡೆ ಆದೇಶ ನೀಡದೆ ಇರುವುದರಿಂದ ರೈತರುಗಳಿಗೆ ಬಾಕಿ ಇರತಕ್ಕ ರೂ. 14.12 ಕೋಟಿ ಹಣ ಪಾವತಿಸಲು ಸಾಧ್ಯವಾಗಿರುವುದಿಲ್ಲ ಎಂದು ತಿಳಿಸಿ ಆರ್ಥಿಕ ತೊಂದರೆಯಿಂದ ಶುಚೀಕರಣ ಕೆಲಸಗಳು ವಿಳಂಬವಾಗಿ ಸಕಾಲದಲ್ಲಿ ಮುಂದಿನ ಹಂಗಾಮು ಪ್ರಾರಂಭಿಸಲು ತೊಂದರೆಯಾಗುವುದರಿಂದ ಸರ್ಕಾರದ ವತಿಯಿಂದ ರೂ. 22.00 ಕೋಟಿಗಳ ಹಣವನ್ನು ಅಲ್ಪಾವಧಿ ಸಾಲದ ರೂಪದಲ್ಲಿ ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ಕೋರಿರುವ ಅಲ್ಪಾವಧಿ ಸಾಲ ರೂ. 22.00 ಕೋಟಿಗಳು ಸೇರಿದಂತೆ ಒಟ್ಟು ರೂ. 47.00 ಕೋಟಿಗಳನ್ನು ಕಾರ್ಖಾನೆಯಲ್ಲಿ ಪ್ರಸಕ್ತ ದಾಸ್ತಾನು ಇರುವ ಸಕ್ಕರೆ ಮಾರಾಟದಿಂದ ಬರುವ ಹಣದಲ್ಲಿ ಮರುಪಾವತಿ ಮಾಡುವ ಷರತ್ತಿನೊಂದಿಗೆ ಕಾರ್ಖಾನೆಗೆ 2011–12ನೇ ಸಾಲಿನ ಪೂರ್ವಭಾವಿ ಸಿದ್ಧತೆಗಳಿಗಾಗಿ ಮತ್ತು ರೈತರ ಕಬ್ಬು ಬಿಲ್ಲು ಪಾವತಿಗಾಗಿ ರೂ. 22.00 ಕೋಟಿಗಳ ಅಲ್ಪಾವಧಿ ಸಾಲವನ್ನು ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರದ ಪರಿಗಣನೆಗೆ ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 63 ಸಸಕಾ 2011, ಬೆಂಗಳೂರು, ದಿನಾಂಕ: 12–07–2011**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ರೂ. 10.00 ಕೋಟಿ (ಹತ್ತು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ದುಡಿಯುವ ಬಂಡವಾಳವಾಗಿ ಸಾಧಿಲ್ವಾರು ನಿಧಿಯಿಂದ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ:–

1. ಮಂಜೂರು ಮಾಡಲಾದ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ "8000–00–660–0–00–ಸಹಕಾರಕ್ಕೆ ಸಾಲ" ಇದರಡಿ ಬಿಡುಗಡೆ ಮಾಡಿ ನಂತರ ಲೆಕ್ಕಶೀರ್ಷಿಕೆ "6860–04–101–0–10– Loans to Pandavapur Sugar Factory" ಇದರಡಿಯಲ್ಲಿ ಪೂರಕ ಅಂದಾಜಿನಲ್ಲಿ ನಿಧಿಗೆ ಮರು ತುಂಬತಕ್ಕದ್ದು.
2. ಆರ್ಥಿಕ ಇಲಾಖೆಯು ರೂ. 10.00 ಕೋಟಿ ಮೊಬಲಗನ್ನು ಸಾಧಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಪ್ರತ್ಯೇಕ ಆದೇಶವಿಲ್ಲದೇ ಈ ಆದೇಶದ ಮೇಲೆಯೇ ಮೊಬಲಗನ್ನು ಪಡೆಯುವಂತಿಲ್ಲ.
3. ಅಧಿಕಾರಿಯು ಸಾಧಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಹೊರಡಿಸಿದ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯ ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳತಕ್ಕದ್ದು.
4. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಿಂದ ಒಂದಾವರ್ತಿ ತೀರುವಳಿಗೆ ಸಂಬಂಧಪಟ್ಟಂತೆ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಯು ಅಂದಾಜು ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ದಿನಾಂಕ: 08–07–2011ರ ಆಇ 284 ವೆಚ್ಚ–2 ಮತ್ತು 10/2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

ಪಿಆರ್.ನಂ. 1752

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಮಲ್ಲಿದೇವನ ಹಳ್ಳಿ ಹತ್ತಿರ ಕುಂತಿ ಹೊಳೆಗೆ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಇ.ಐ.ಆರ್.ಎಲ್.ಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007 ದಿನಾಂಕ: 13–05–2008.

2. ದಿನಾಂಕ: 01–06–2011ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ರವರ ಪತ್ರ ಸಂಖ್ಯೆ: ಮುಸದ/ತಾಂ.ಸ.2/ಚಿ.ಮ./ಕುಂತಿಹೊಳೆ/ಇ.ಐ.ಆರ್.ಎಲ್./2011–12/2165.

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007 ದಿನಾಂಕ: 13–05–2008ರಲ್ಲಿ ಆರ್.ಐ.ಡಿ.ಎಫ್–13 ರಡಿ 162 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಅವುಗಳ ಪೈಕಿ ರೂ. 20.00 ಲಕ್ಷದ ಅಂದಾಜು ಮೊತ್ತದ ಮೇಲ್ಕಂಡ ಕಾಮಗಾರಿ ಸೇರಿದೆ. ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರುರವರ ಕಛೇರಿ ನೋಂದಣಿ ಸಂಖ್ಯೆ: 747/2009–10ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಕಾಮಗಾರಿಯ ಅನುಷ್ಠಾನಕ್ಕಾಗಿ ಕೆ.ಎಸ್. ರಮೇಶ್, ಗುತ್ತಿಗೆದಾರರು ಇವರಿಗೆ ಟೆಂಡರ್ ಅನುಮೋದಿಸುವಾಗ ಚಾಲ್ತಿಯಲ್ಲಿದ್ದ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ರೂ. 19,12,066/– ಮೊತ್ತದ ಮೇಲೆ ಶೇಕಡ 1.63 ಹೆಚ್ಚಿನ ದರದಲ್ಲಿ ಅಂದರೆ ರೂ. 19,43,286/– ಮೊತ್ತಕ್ಕೆ ವಹಿಸಲಾಗಿರುತ್ತದೆ. ಕಾಮಗಾರಿ ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ಇಲಾಖೆಯ ಅಧಿಕಾರಿಗಳು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಗಳಂತೆ ಕಾಮಗಾರಿಯ ಕೆಲಸಗಳನ್ನು ನಿರ್ವಹಿಸಿದ್ದರಿಂದ ಕಾಮಗಾರಿಯ ವೆಚ್ಚದಲ್ಲಿ ಹೆಚ್ಚಳವಾಗಿದೆ. ವಾಸ್ತವಿಕ ಅವಶ್ಯಕತೆಗೆ ಅನುಗುಣವಾಗಿ ಕಾಮಗಾರಿಯಲ್ಲಿ 92,817/– ರೂ.ಗಳ ಹೆಚ್ಚಿನ ಆರ್ಥಿಕ ಹೊರೆ ಉಂಟಾಗಿದ್ದು, ಮೂಲ ಅಂದಾಜು ಮೊತ್ತ ರೂ. 20,00,000/– ಲಕ್ಷಕ್ಕೆ ಹೋಲಿಸಿದಾಗ ಶೇ. 4.64 ರಷ್ಟು ಹೆಚ್ಚಳ ಉಂಟಾಗಿದೆ. ಸದರಿ ಕಾಮಗಾರಿಯ ಹೆಚ್ಚುವರಿ ಕಾಮಗಾರಿಯ ಮೊತ್ತಕ್ಕೆ ಅನುಮೋದನೆ ಕೋರಿ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 47 ಅಪಿಬಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಮಲ್ಲಿದೇವನ ಹಳ್ಳಿ ಹತ್ತಿರ ಕುಂತಿ ಹೊಳೆಗೆ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಮೊತ್ತ ರೂ. 20.00 ಲಕ್ಷದ ಮೇಲೆ ಉಂಟಾಗಿರುವ ಹೆಚ್ಚುವರಿ ಆರ್ಥಿಕ ಹೊರೆ ರೂ. 92,817/– (ತೊಂಬತ್ತೆರಡು ಸಾವಿರದ ಎಂಟು ನೂರ ಹದಿನೇಳು ರೂ.ಗಳು ಮಾತ್ರ) ಪ್ರಸ್ತಾವನೆಗೆ (ಅನುಮೋದಿತ ಟೆಂಡರ್ ಪ್ರೀಮಿಯಮ್ ಮೊತ್ತವೂ ಸೇರಿ) ಈ ಬಾಬ್ತನ್ನು ಪರಿಷ್ಕೃತ ಅಂದಾಜಿನಲ್ಲಿ ಸೇರಿಸಿಕೊಳ್ಳುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ–1: ಟಿಎಫ್‌ಪಿ 2002 ದಿನಾಂಕ: 20–01–2003 ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿಆರ್.ನಂ. 1753

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ :** ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–5:ಮನವಿ:58:2006–07 ದಿನಾಂಕ: 12–12–2007.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–5:ಮನವಿ:58:2006–07 ದಿನಾಂಕ: 30–05–2008.

**ಪ್ರಸ್ತಾವನೆ:**

ಭಾರತೀಯ ರಿಸರ್ವ್ ಬ್ಯಾಂಕಿನ ಪರಿವೀಕ್ಷಣಾ ವರದಿಯಲ್ಲಿ ಕಂಡು ಬಂದ ಗುರುತರ ಲೋಪದೋಷಗಳನ್ನು ಆಧರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಸಹಕಾರ ಸಂಘಗಳ ನಿಬಂಧಕರು ಸದರಿ ಬ್ಯಾಂಕಿನ ಆಡಳಿತ ಸಮಿತಿಯನ್ನು ರದ್ದುಗೊಳಿಸಿ ಮೇಲೆ ಓದಲಾದ (1) ಆದೇಶದಲ್ಲಿ ಆಡಳಿತಗಾರರನ್ನು ನೇಮಿಸಿದ್ದಾರೆ. ತದನಂತರ ಆಡಳಿತಗಾರರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿದ್ದು ದಿನಾಂಕ: 02–06–2008 ರವರೆಗೆ ವಿಸ್ತರಿಸಿದ್ದು, ಸದರಿ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ದಿನಾಂಕ: 03–06–2008 ರಿಂದ 02–12–2008ರವರೆಗೆ ಆರು ತಿಂಗಳವರೆಗೆ ವಿಸ್ತರಿಸಬಹುದೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 109 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 27–06–2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 03–06–2008 ರಿಂದ 02–12–2008 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಹದಿನೆಂಟು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–12–2008 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಮನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿಆರ್.ನಂ. 1754

## ಸಹಕಾರ ಸಚಿವಾಲಯ

**ವಿಷಯ :** ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ನಿ. ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 109 ಸಿಎಲ್ಎಂ 2008 ದಿನಾಂಕ: 27–06–2008.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–5:ಮನವಿ:58:2006–07 ದಿನಾಂಕ: 20–10–2008.

**ಪ್ರಸ್ತಾವನೆ:**

ಭಾರತೀಯ ರಿಸರ್ವ್ ಬ್ಯಾಂಕಿನ ಪರಿವೀಕ್ಷಣಾ ವರದಿಯಲ್ಲಿ ಕಂಡು ಬಂದ ಗುರುತರ ಲೋಪದೋಷಗಳನ್ನು ಆಧರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಸಹಕಾರ ಸಂಘಗಳ ನಿಬಂಧಕರು ಸದರಿ ಬ್ಯಾಂಕಿನ ಆಡಳಿತ ಸಮಿತಿಯನ್ನು ರದ್ದುಗೊಳಿಸಿ ದಿನಾಂಕ: 12–12–2007 ರಂದು ಆಡಳಿತಗಾರರನ್ನು ನೇಮಿಸಿದ್ದಾರೆ. ತದನಂತರ ಆಡಳಿತಗಾರರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿದ್ದು ಓದಲಾದ 1ರ ಆದೇಶದಲ್ಲಿ ದಿನಾಂಕ: 03–12–2008 ರವರೆಗೂ ವಿಸ್ತರಿಸಿದ್ದು ಈ ಅವಧಿಯು ಮುಕ್ತಾಯವಾಗುತ್ತಿರುವ ಹಿನ್ನೆಲೆಯಲ್ಲಿ ಬ್ಯಾಂಕಿನ ಅಭಿವೃದ್ಧಿಯ ಹಿತದೃಷ್ಟಿಯಿಂದ ಆಡಳಿತಗಾರರ ಅವಧಿಯನ್ನು ದಿನಾಂಕ: 03–12–2008 ರಿಂದ 31–03–2010 ಮಾರ್ಚ್ 2010ರ ತನಕ ವಿಸ್ತರಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 204 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 05–12–2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ನಿ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 03–12–2008 ರಿಂದ 31–03–2010 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಮೂವತ್ತನಾಲ್ಕು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–03–2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಮನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿಆರ್.ನಂ. 1755

## ಸಹಕಾರ ಸಚಿವಾಲಯ

**ವಿಷಯ :** ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ. ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 380 ಸಿಎಲ್ಎಂ 2010 ದಿನಾಂಕ: 04–05–2010.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–5:ಮನವಿ:58:2006–07 ದಿನಾಂಕ: 05–04–2011.

**ಪ್ರಸ್ತಾವನೆ:**

ಅಮಾನತ್ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 31–03–2011ರವರೆಗೆ ವಿಸ್ತರಿಸಿದ್ದು, ಈಗ ಸದರಿ ಅವಧಿಯು ಮುಕ್ತಾಯಗೊಂಡಿರುತ್ತದೆ. ಸದರಿ ಬ್ಯಾಂಕಿನ ಕಾರ್ಯನಿರ್ವಹಣೆ ಕುರಿತು ದಿನಾಂಕ: 24–01–2011 ರಂದು ನಡೆದ ಕಾರ್ಯನಿರ್ವಹಣೆ ಸಮಿತಿ ಸಭೆಯಲ್ಲಿ ಆಡಳಿತ ಮಂಡಳಿ ಚುನಾವಣೆ ನಡೆಸಲು ನಿರ್ಣಯಿಸಲಾಗಿ, ಬ್ಯಾಂಕಿನ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಅನುಮತಿ ಕೋರಿದೆ ಹಾಗೂ ಆಡಳಿತ ಮಂಡಳಿ ಚುನಾವಣೆ ನಡೆದು ಹೊಸ ಆಡಳಿತ ಮಂಡಳಿ ಅಧಿಕಾರ ವಹಿಸಿಕೊಳ್ಳುವವರೆಗೆ ಅಥವಾ, ದಿನಾಂಕ: 01–04–2011 ರಿಂದ ಆರು ತಿಂಗಳವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಮೇರೆಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 77 ಸಿಎಲ್ಎಂ 2011, ಬೆಂಗಳೂರು, ದಿನಾಂಕ: 25–05–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 01–04–2011 ರಿಂದ 30–09–2011 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಮಾನತ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಬೆಂಗಳೂರು ಇದಕ್ಕೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ. ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಐವತ್ತೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: 2) ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2011 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿಆರ್.ನಂ. 1756

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ. ಆಂಜನಪ್ಪ ಎ.ಎಸ್.ಐ., ಶ್ರೀರಾಮಪುರ ಪೊಲೀಸ್ ಠಾಣೆ ಮತ್ತು ಶ್ರೀ ರಾಮಚಂದ್ರಯ್ಯ, ಹೆಚ್.ಸಿ., ಸದಾಶಿವನಗರ ಪೊಲೀಸ್ ಠಾಣೆ, ಬೆಂಗಳೂರು, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 66/ಡಿಇ–1/ಆರ್ 6 /2008 ದಿನಾಂಕ: 20–10–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4) 54/2009–10 (ಓ.ಬಿ. 17/2010–11) ದಿನಾಂಕ: 09–08–10.
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–10–2010 ಮತ್ತು 18–10–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)63/2010–11 ದಿನಾಂಕ: 10–12–2010.

**ಪ್ರಸ್ತಾವನೆ :**

ಶ್ರೀ ಜಿ. ಅಂಜನಪ್ಪ ಎ.ಎಸ್.ಐ., ಮತ್ತು ರಾಮಚಂದ್ರಯ್ಯ, ಹೆಚ್.ಸಿ., ಇವರುಗಳು ಬೆಂಗಳೂರಿನ ಬಸವೇಶ್ವರನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಅಧಿಕಾರ ದುರುಪಯೋಗ ಪಡಿಸಿಕೊಂಡ ಕಾರಣದ ಮೇಲೆ ಕನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಜಿ. ಆಂಜನಪ್ಪ ಎ.ಎಸ್.ಐ., ಮತ್ತು ಶ್ರೀ ರಾಮಚಂದ್ರಯ್ಯ, ಹೆಚ್.ಸಿ.–3293, ಬಸವೇಶ್ವರನಗರ ಪೊಲೀಸ್ ಠಾಣೆ ಬೆಂಗಳೂರು ನಗರ ಆದ ನಿಮ್ಮನ್ನು ದಿ: 26–09–2008 ರಂದು ರಾತ್ರಿ ಕರ್ತವ್ಯಕ್ಕಾಗಿ ಕ್ರಮವಾಗಿ ಹೊಯ್ಸಳ–15 ವಾಹನ ಸಂಖ್ಯೆ: ಕೆಎಂ 2–ಜಿ–846ಕ್ಕೆ ಹಾಗೂ ಚೀತಾ–112, ವಾಹನ ಸಂಖ್ಯೆ ಕೆಎಂ 2 –ಜಿ– 777ಕ್ಕೆ ನೇಮಕ ಮಾಡಿ, ನೀವು ಬಸವೇಶ್ವರನಗರ ಠಾಣೆ ವ್ಯಾಪ್ತಿಯಲ್ಲಿ ಗಸ್ತು ಮಾಡಿ, ಯಾವುದೇ ಅಪರಾಧ, ಗಲಾಟೆ ವಗೈರೆ ನಡೆಯದಂತೆ ಕರ್ತವ್ಯ ನಿರ್ವಹಿಸಲು ನೇಮಕ ಮಾಡಿದ್ದು, ನೀವು ಸರಹದ್ದಿನ ವ್ಯಾಪ್ತಿಯಲ್ಲಿನ ಬಾರ್ ಅಂಡ್ ರೆಸ್ಟೋರೆಂಟ್, ಕೈಗಾಡಿ ವ್ಯಾಪಾರಿಗಳು, ರಸ್ತೆ ಬದಿಯ ಸಣ್ಣ ಕ್ಯಾಂಟೀನ್ ಹಾಗೂ ಗಣೇಶ ಉತ್ಸವ ನಡೆಸುತ್ತಿದ್ದ ಸ್ಥಳಗಳಿಗೆ ಹೋಗಿ ಸಂಬಂಧಪಟ್ಟವರಿಂದ ಅಕ್ರಮ ಸಂಭಾವನೆಯಾಗಿ ಹಣವನ್ನು ಪಡೆದುಕೊಂಡು, ಹಣಕ್ಕಾಗಿ ಸಾರ್ವಜನಿಕರೊಂದಿಗೆ ವಾಗ್ವಾದ ನಡೆಸಿ, ಸಾರ್ವಜನಿಕರ ಎದುರಿನಲ್ಲಿಯೇ ವಸೂಲಾದ ಹಣವನ್ನು ಪರಸ್ಪರ ಹಂಚಿಕೊಂಡ ಬಗ್ಗೆ ಸುವರ್ಣ ನ್ಯೂಸ್ ಚಾನೆಲ್‌ನವರ ಈ ಎಲ್ಲಾ ಕಾರ್ಯಗಳನ್ನು ವಿಡಿಯೋ ತೆಗೆದು ದೂರದರ್ಶನದಲ್ಲಿ ಪ್ರಸಾರ ಮಾಡಿದ್ದು, ನೀವು ನಿಮ್ಮಗಳ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಪಡಿಸಿಕೊಂಡು ಪೊಲೀಸ್ ಇಲಾಖೆಯ ಗೌರವಕ್ಕೆ ಕುಂದುಂಟು ಮಾಡಿ, ಪೊಲೀಸ್ ಮ್ಯಾನ್ಯುಯಲ್ ಭಾಗ–1 ಆದೇಶ ಸಂ. 297ನ್ನು ಮೀರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ : 20–10–2009ರ ಆದೇಶದಲ್ಲಿ ಅರ್ಜಿದಾರರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ದಿ: 20–10–2008 ರಿಂದ 25–02–2009ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರುಗಳ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–8–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ

ದಂಡನಾದೇಶವನ್ನು ಮಾರ್ಪಡಿಸಿ ಇವರುಗಳನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ. ಇವರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಒಂದು ವರ್ಷದ ಅವಧಿಗೆ ಮುಂದೂಡಲಾಗಿದೆ. ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 20–10–2008 ರಿಂದ 25–02–2009ರ ವರೆಗಿನ ಅವಧಿಯನ್ನು ಸದರಿ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ ಕಡ್ಡಾಯ ನಿವೃತ್ತಿಗೊಳಿಸಿದ ದಿನಾಂಕದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ದಿನಾಂಕದವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿ (Dies non) ಎಂದು ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರುಗಳು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 158 ಪೊಸಿಅ 2010, ಬೆಂಗಳೂರು, ದಿನಾಂಕ : 11–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ಆಂಜನಪ್ಪ ಎ.ಎಸ್.ಐ., ಶ್ರೀರಾಮಪುರ ಪೊಲೀಸ್ ಠಾಣೆ ಮತ್ತು ರಾಮಚಂದ್ರಯ್ಯ, ಹೆಚ್.ಸಿ., ಸದಾಶಿವನಗರ ಪೊಲೀಸ್ ಠಾಣೆ ಬೆಂಗಳೂರು ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1757 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಜಯಚಿತ್ರ ಕೋಂ ದಿ: ಪಿ. ಕೇಶವಮೂರ್ತಿ, ಮಾಜಿ ಪಿ.ಸಿ., 8ನೇ ಪಡೆ ಕೆ.ಎಸ್.ಆರ್.ಪಿ. ಶಿವಮೊಗ್ಗ, ಇವರು ಸಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮಾಂಡೆಂಟ್, ಕೆ.ಎಸ್.ಆರ್.ಪಿ. 8ನೇ ಪಡೆ, ಶಿವಮೊಗ್ಗ, ಇವರ ಆದೇಶ ಸಂಖ್ಯೆ: 57/ಡಿಇ/6/2002–03 ದಿ: 31–12–03.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16–3–2009.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)22/2009–10 ದಿನಾಂಕ: 06–10–2009.

**ಪ್ರಸ್ತಾವನೆ :**

ಶ್ರೀ ಕೇಶವಮೂರ್ತಿ, ಇವರು 8ನೇ ಪಡೆ, ಕೆ.ಎಸ್.ಆರ್.ಪಿ.ಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ನಿರಂತರವಾಗಿ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯಕ್ಕೆ ನಿರ್ಲಕ್ಷತೆ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

ಶ್ರೀ ಪಿ. ಕೇಶವಮೂರ್ತಿ, ಪೇದೆ ಸಂ–31, 'ಡಿ' ದಳ, 8ನೇ ಪಡೆ ಕೆ.ಎಸ್.ಆರ್.ಪಿ. ಶಿವಮೊಗ್ಗ, ಆದ ನೀವು ದಿ: 26–8–02 ರಿಂದ 19–4–03ರ ವರೆಗೆ ಒಟ್ಟು 237 ದಿನಗಳು ಕರ್ತವ್ಯಕ್ಕೆ ನಿರಂತರವಾಗಿ ಅನಧಿಕೃತವಾಗಿ ಗೈರುಹಾಜರಿಯಾಗಿ ಕರ್ತವ್ಯ ನಿರ್ಲಕ್ಷ್ಯತೆ, ಬೇಜವಾಬ್ದಾರಿ ಮತ್ತು ಅಶಿಸ್ತನ್ನು ಪ್ರದರ್ಶಿಸಿರುವಿರಿ.

ದಿನಾಂಕ: 26–8–02 ರಿಂದ ನಿರಂತರವಾಗಿ ಕರ್ತವ್ಯ ಅನಧಿಕೃತವಾಗಿ ಗೈರುಹಾಜರಿಯಾಗಿದ್ದು ನಿಮ್ಮ ಗೈರು ಹಾಜರಿ ಅವಧಿಯು 21 ದಿನಗಳಿಗೂ ಮೀರಿದ್ದುದರಿಂದ ಹಾಗೂ ನಿಮಗೆ ವಿತರಿಸಲಾಗಿರುವ ಸರ್ಕಾರಿ ಕಿಟ್ ಸಾಮಗ್ರಿಗಳ ಸಹಿತ ಗೈರು ಹಾಜರಾಗಿದ್ದುದರಿಂದ ನಿಮಗೆ ಕೂಡಲೇ ಕರ್ತವ್ಯಕ್ಕೆ ಮರಳಿ ಹಾಜರಾಗುವಂತೆಯೂ, ತಪ್ಪಿದಲ್ಲಿ ನಿಮ್ಮ ವಿರುದ್ಧ ಏಕಪಕ್ಷೀಯವಾಗಿ, ಶಿಸ್ತಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ಸೂಚಿಸಿ ಮಾನ್ಯ ಕಮಾಂಡೆಂಟ್ 8ನೇ ಪಡೆ ಕೆ.ಎಸ್.ಆರ್.ಪಿ. ಶಿವಮೊಗ್ಗರವರು ತಮ್ಮ ಪತ್ರ ಸಂಖ್ಯೆ: 57/ಡಿಇ/ಡಿಎನ್/2002–03 ದಿ: 21–10–2002 ರಂದು ಹೊರಡಿಸಿದ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ಪತ್ರವನ್ನು ನೀವು ದಿನಾಂಕ: 25–10–2002 ರಂದು ಸ್ವೀಕರಿಸಿಯೂ ಸಹ ನೀವು ನಿಮ್ಮ ಕರ್ತವ್ಯಕ್ಕೆ ತಕ್ಷಣ ಹಾಜರಾಗದೆ ಹಿರಿಯ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಅವಿಧೇಯತೆಯನ್ನು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಕಮಾಂಡೆಂಟ್ ಕೆ.ಎಸ್.ಆರ್.ಪಿ. 8ನೇ ಪಡೆ ಶಿವಮೊಗ್ಗ, ಇವರ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ : 31–12–2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ಅನಧಿಕೃತವಾಗಿ ಗೈರುಹಾಜರಾದ ಅವಧಿ ದಿನಾಂಕ 26–08–2002 ರಿಂದ 19–04–2003ರ ವರೆಗಿನ ಒಟ್ಟು 237 ದಿನಗಳನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಅ.ಪೊ.ಅ. ರವರು ದಿನಾಂಕ: 10–04–2004 ರಂದು ನಿಧನ ಹೊಂದಿರುವುದರಿಂದ ಅವರ ಪತ್ನಿ ಶ್ರೀಮತಿ ಜಯಚಿತ್ರ, ಇವರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದಾರೆ.

ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರಿಯ ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 108 ಪೊಸಿಅ 2009, ಬೆಂಗಳೂರು, ದಿನಾಂಕ : 11-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಜಯಚಿತ್ರ ಕೋಂ ದಿ: ಪಿ. ಕೇಶವಮೂರ್ತಿ, ಮಾಜಿ ಪಿ.ಸಿ. 8ನೇ ಪಡೆ ಕೆ.ಎಸ್.ಆರ್.ಪಿ. ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1758

## EDUCATION SECRETARIAT

**Sub :** Re-constitution of the State Level Committee for processing of applications for additional courses and additional intake in existing polytechnics.

**Read :**
1. Government. Order No. ED 381 TPE 2004, dated : 28-02-2005.
2. Letter No. DTE 38 DVP (2) 2010 Dated 18-10-2010 and 13-05-2011.
3. AICTE Public Notice for Academic year 2011-12 (Polytechnics)
4. Stay order passed in WP No. 7641/2011 filed by the Karnataka Private Polytechnic Association before the Hon'ble High Court of Karnataka.
5. WA No. 2476/2011 filed by AICTE against the orders in W.P. No. 7641/2011.

**Preamble:**

A State Level Committee under the Chairmanship of Principal Secretary, Higher Education Department was constituted vide G.O. read at (1) above for processing the following categories of applications as per the guidelines framed by the A.I.C.T.E

(A) The applications for increase in intake in the existing diploma in Engineering and Technology Institutes.

(B) The applications for the introduction of additional courses in the existing diploma in Engineering and Technology Institutes.

(C) The approval for grant if extension of approval beyond the year 2001-02 for existing diploma in Engineering and Technology Institutes.

2. The Director of Technical Education in his letters read at (2) above has proposed to include two members in the above said committee and requested for reconstitution of the State Level Committee.

3. A.I.C.T.E. New Delhi in their Public Notice dated 24-12-2010 read at (3) above has now withdrawn the delegation of powers to the State Government for the processing of application pertaining to Diploma level institutions in Engineering and Technology, which were earlier given in the letter No. 711-005/GDIP/ET 2001, dated 27-3-2001 vide ref (3) above from the academic year 2011-12.

4. The above Public Notice of the AICTE was challenged by the Karnataka Private Polytechnic Association before the Ho'ble High Court of Karnataka by WP No. 7641/2011 read at (4) above and Hon'ble High Court of Karnataka has stayed the AICTE Notification dated 24-12-2010.

5. The AICTE has filed a WA No. 2476/2011 before the Hon'ble High Court of Karnataka read at (6) above and the Hon'ble High Court after hearing has dismissed the same.

6. The Government have examined the proposal decided to re-constitute the State Level Committee. Hence the order.

**Government Order No. : ED 119 TPE 2007, Bangalore, Dated: 7th July 2011**

Government are pleased to re-constitute the State Level Committee for processing of applications for additional courses and additional intake in existing polytechnics in Karnataka for the year 2011-12 with the following members.

| | | |
|---|---|---|
| 01 | Principal Secretary to Government Higher Education Department, Government of Karnataka | Chairperson |
| 02 | Regional Officer, South Western Regional Office, AICTE, Bangalore | Member |
| 03 | Dr. S.C. Sharma, Vice-Chancellor, Tumkur University and Vice-President, Karnataka State Council for Higher Education, Bangalore. | Member |

| | | |
|---|---|---|
| 04 | Executive Director, Karnataka Examinations Authority, Bangalore | Member |
| 05 | Principal, Government S.K.S.J.T. Institiute, Bangalore | Member |
| 06 | Principal, Unversity Visvesvaraya College of Engineering, Bangalore | Member |
| 07 | Director of Technical Education, Bangalore | Member Secretary |

By Order and in the name of the Governor of Karnataka

**B.N. Jagadeesh**

Under Secretary to Government

Education Department

(Technical Education)

P.R. 1759

## ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಪಂಚಾಯತ್ ಯೋಜನಾ ಘಟಕದಲ್ಲಿರುವ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು 2011–12ನೇ ಸಾಲಿನಲ್ಲಿ ಮುದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಯೋಇ 7 ಸಸಪ್ರ 2010, ದಿ: 10/06/2010
2. ಸರ್ಕಾರದ ಆದೇಶ ಸಂಖ್ಯೆ: ಪಿಡಿ 102 ಎಸ್ಎಂಸಿ 2006, ದಿ: 11/06/2007.
3. ಸರ್ಕಾರದ ಆದೇಶ ಸಂಖ್ಯೆ: ಪಿಡಿ 15 ಎಸ್ಎಂಸಿ 2010, ದಿ: 22/11/2010.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಇವರ ಪತ್ರ ಸಂಖ್ಯೆ: ಜಿಪತು/ಯೋಶಾ/ವಿವ/1/2011–12, ದಿ: 05–07–2011.
5) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಯಾದಗಿರಿ ಇವರ ಪತ್ರ ಸಂಖ್ಯೆ: ಜಿಪಯ/ಯೋಶಾ/75/10–11, ದಿ: 25–03–2010.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದ 28 ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ 342 ತಾತ್ಕಾಲಿಕ ಯೋಜನೇತರ ಹುದ್ದೆಗಳನ್ನು 2010–11ನೇ ಸಾಲಿಗೆ ಅಂದರೆ ದಿನಾಂಕ: 01–04–2010 ರಿಂದ 31–03–2011 ರವರೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಮುಂದುವರೆಸಿದೆ.

ಮೇಲೆ ಕ್ರ.ಸಂ. 2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 64 ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಿ ಕೆಳಕಂಡ 64 ಹುದ್ದೆಗಳನ್ನು ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕಗಳಿಂದ ತಾಲ್ಲೂಕು ಯೋಜನಾ ಘಟಕಗಳಿಗೆ ಮರು ಹೊಂದಾಣಿಕೆ ಮುಖಾಂತರ ವರ್ಗಾವಣೆ ಮಾಡಿ ತಾಲ್ಲೂಕು ಯೋಜನಾ ಅಧಿಕಾರಿಗಳೆಂದು ನಾಮಕರಣ ಮಾಡಲಾಗಿದೆ.

1. ಪ್ರಾದೇಶಿಕ ಯೋಜನಾಧಿಕಾರಿ – 12 ಹುದ್ದೆಗಳು
2. ಮಾನವ ಶಕ್ತಿ ಮತ್ತು ಪತ್ತು ಯೋಜನಾಧಿಕಾರಿ – 25 ಹುದ್ದೆಗಳು
3. ಸಾಂಖ್ಯಿಕ ಅಧಿಕಾರಿ – 27 ಹುದ್ದೆಗಳು

ಸದರಿ ಆದೇಶದಲ್ಲಿ ತಾಲ್ಲೂಕು ಯೋಜನಾ ಘಟಕದ ಸಿಬ್ಬಂದಿ ವೇತನ ಮತ್ತು ಇತರೆ ಭತ್ಯೆಗಳನ್ನು ಅವರು ಪಡೆಯುತ್ತಿದ್ದ ಲೆಕ್ಕ ಶೀರ್ಷಿಕೆಯಲ್ಲಿಯೇ ಭರಿಸತಕ್ಕದೆಂದು ಕೂಡ ಸೂಚಿಸಲಾಗಿದೆ.

ತಾಲ್ಲೂಕು ಯೋಜನಾ ಘಟಕಗಳ ಹುದ್ದೆಗಳು ಯೋಜನಾ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ಈ ಘಟಕಗಳು ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಹಣಾಧಿಕಾರಿಗಳ ಆಡಳಿತ ನಿಯಂತ್ರಣದಲ್ಲಿ ಮತ್ತು ಆಯಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಯೋಜನಾಧಿಕಾರಿಗಳ ತಾಂತ್ರಿಕ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಂಪೂರ್ಣ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸತಕ್ಕದ್ದು.

ಮೇಲೆ ಕ್ರ.ಸಂ. 3 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ತಾಲ್ಲೂಕು ಪಂಚಾಯತಿಗಳಲ್ಲಿ ಸೃಜಿಸಿ ಆದೇಶಿಸಲಾಗಿದೆ.

ಮುದುವರೆದು ಸದರಿ 43 ತಾಲ್ಲೂಕು ಯೋಜನಾ ಘಟಕಗಳಿಗೆ ತಾಲ್ಲೂಕು ಯೋಜನಾಧಿಕಾರಿಗಳನ್ನು ನೇಮಿಸುವ ಸಲುವಾಗಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 43 ಸಹಾಯಕ ನಿರ್ದೇಶಕರುಗಳ ಹುದ್ದೆಗಳನ್ನು ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ವರ್ಗಾಯಿಸಿ ಆದೇಶಿಸಲಾಗಿದೆ.

ಅದರಂತೆಯೇ ಸಂಬಂಧಪಟ್ಟ ಅಯಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ತಾಲ್ಲೂಕು ಪಂಚಾಯತ್ ಅಧಿಕಾರಿಗಳು ಸದರಿ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗೆ ಅಗತ್ಯವಿರುವ ಮತ್ತು ಇತರೆ ಭತ್ಯೆಗಳಿಗಾಗಿ ಅನುದಾನವನ್ನು ಒದಗಿಸಿಕೊಳ್ಳಲು ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ತಾಲ್ಲೂಕು ಯೋಜನಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿರುವಂತೆ ತಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸತಕ್ಕದ್ದು.

ಮೇಲೆ ಕ್ರ.ಸಂ. 4 ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ತುಮಕೂರು ಇವರು ಯೋಜನಾ ಘಟಕದಲ್ಲಿರುವ ಯೋಜನೇತರ ಹುದ್ದೆಗಳು ಅತಿ ಅವಶ್ಯಕವಾಗಿರುವುದರಿಂದ ಹಾಗೂ ಹೊಸದಾಗಿ ಸೃಜಿನೆಯಾದ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗಳನ್ನೂ ಸಹ ಆಡಳಿತಾತ್ಮಕ ಹಿತದೃಷ್ಟಿಯಿಂದ 2011–12ನೇ ಸಾಲಿಗೆ ಮುಂದುವರಿಸಬೇಕೆಂದು ಕೋರಿರುತ್ತಾರೆ.

ಮೇಲೆ ಕ್ರ.ಸಂ. 5 ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಯಾದಗಿರಿ ಇವರು ಯೊಜನಾ ಘಟಕದಲ್ಲಿರುವ ಸದರಿ ಯೋಜನೇತರ ಹುದ್ದೆಗಳು ಅತಿ ಅವಶ್ಯಕವಾಗಿರುವುದರಿಂದ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರಸ್ತಾಪಿಸಿರುವ ಹುದ್ದೆಗಳನ್ನು 2011–12ನೇ ಸಾಲಿಗೆ ಮುಂದುವರಿಸಬೇಕೆಂದು ಕೋರಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 59 ಭೂದಾಪು 2008, ದಿ: 26–12–2009 ರಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದನ್ನು ವಿಭಜಿಸಿ, ಯಾದಗಿರಿ ಪಟ್ಟಣವನ್ನು ಹೊಸ ಜಿಲ್ಲೆಯಾಗಿ ಸೃಜಿಸಲಾಗಿದೆ.

ಹೊಸದಾಗಿ ಸೃಜಿನೆಯಾದ ಯಾದಗಿರಿ ಜಿಲ್ಲಾ ಪಂಚಾಯತ್‌ಗೆ ಈ ಕೆಳಕಂಡ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 202 ಕೆ.ಎಸ್.ಎಸ್. 2009, ದಿ: 26–11–2010 ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಮಂಜೂರು ಮಾಡಲಾಗಿದೆ.

| ಕ್ರಮ.ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳು |
|---|---|---|
| 1. | ಮುಖ್ಯ ಯೋಜನಾಧಿಕಾರಿಗಳು | 1 |
| 2. | ಯೋಜನಾ ಸಹಾಯಕ ಮತ್ತು ಮೌಲ್ಯಮಾಪನ ಅಧಿಕಾರಿ | 1 |
| 3. | ತಾಲ್ಲೂಕು ಯೋಜನಾಧಿಕಾರಿ (ಪ್ರಾದೇಶಿಕ ಯೋಜನಾಧಿಕಾರಿ) | 1 |
| 4. | ಯೋಜನಾ ಸಹಾಯಕರು (ಆರ್ಥಿಕ) | 1 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | 1 |
| 6. | ಪ್ರಥಮ ದರ್ಜೆ ಸಹಾಯಕರು | 1 |
| 7. | ದ್ವಿತೀಯ ದರ್ಜೆ ಸಹಾಯಕರು | 1 |
| 8. | ಶೀಘ್ರಲಿಪಿಗಾರರು | 1 |
| 9. | ಬೆರಳಚ್ಚುಗಾರರು | 1 |
| 10. | ದಲಾಯತ್ | 1 |
| 11. | ವಾಹನ ಚಾಲಕರು | 1 |
| | ಒಟ್ಟು | 11 |

ಯಾದಗಿರಿ ಜಿಲ್ಲಾ ಪಂಚಾಯಿತಿಯನ್ನು ಒಳಗೊಂಡಂತೆ ಹಾಗೂ ಹೊಸದಾಗಿ ಸೃಜಿನೆಯಾದ 43 ತಾಲ್ಲೂಕು ಯೋಜನಾಧಿಕಾರಿಗಳ ಹುದ್ದೆಗಳನ್ನು ಸಹ ಸೇರ್ಪಡೆ ಮಾಡಿಕೊಂಡು, ಒಟ್ಟು 29 ಜಿಲ್ಲಾ ಪಂಚಾಯತ್‌ಗಳಿಗೆ 2011–12ನೇ ಸಾಲಿಗೆ ಜಿಲ್ಲಾ ಪಂಚಾಯತ್‌ನ ಯೋಜನಾ ಘಟಕದಲ್ಲಿರುವ ಎಲ್ಲಾ ಯೋಜನೇತರ ತಾತ್ಕಾಲಿಕ ಹುದ್ದೆಗಳ ವಿವರ ಈ ಕೆಳಕಂಡಂತೆ ಇದೆ:–

| ಕ್ರ. ಸಂ. | ಹುದ್ದೆಗಳ ಹೆಸರು | 28 ಜಿಲ್ಲೆಗಳಿಗೆ ಒಟ್ಟು ಮಂಜೂರಾಗಿರುವ ಹುದ್ದೆಗಳು | ಯಾದಗಿರಿ ಜಿ.ಪಂ.ಗೆ ಮಂಜೂರಾದ ಹುದ್ದೆಗಳು | ಒಟ್ಟು |
|---|---|---|---|---|
| 1 | 2 | 3 | 4 | 5 |
| 1 | ಮುಖ್ಯ ಯೋಜನಾಧಿಕಾರಿಗಳು | 28 | 1 | 29 |
| 2 | ಯೋಜನಾ ಅಂದಾಜು ಮತ್ತು ಮೌಲ್ಯಮಾಪನ ಅಧಿಕಾರಿ | 28 | 1 | 29 |
| 3 | ತಾಲ್ಲೂಕು ಯೋಜನಾಧಿಕಾರಿಗಳು | 63–3=60+43=103 | 1+2=3* | 63+43 |
| 4 | ಯೋಜನಾ ಸಹಾಯಕರು (ಆರ್ಥಿಕ) | 26 | 1 | 27 |
| 5 | ಯೋಜನಾಸಹಾಯಕರು (ಸಾಂಖ್ಯಿಕ) | 24 | 1 | 25 |
| 6 | ಪ್ರಥಮ ದರ್ಜೆ ಸಹಾಯಕರು | 27 | 1 | 28 |
| 7 | ದ್ವಿತೀಯ ದರ್ಜೆ ಸಹಾಯಕರು | 36 | 1 | 37 |
| 8 | ಶೀಘ್ರಲಿಪಿಗಾರರು | 28 | 1 | 29 |
| 9 | ಬೆರಳಚ್ಚುಗಾರರು | 31 | 1 | 32 |
| 10 | ದಲಾಯತ್ | 51 | 1 | 52 |
| | ಒಟ್ಟು | 342–3=382 | 10+2=12 | 394 |

ಆದುದರಿಂದ 29 ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕಗಳಲ್ಲಿರುವ ಎಲ್ಲಾ ಯೋಜನೇತರ ತಾತ್ಕಾಲಿಕ ಹುದ್ದೆಗಳನ್ನು 2011–12ನೇ ಸಾಲಿಗೆ ಅಂದರೆ ದಿನಾಂಕ: 01/04/2011 ರಿಂದ 31/03/2012ರ ವರೆಗೆ ಮತ್ತೊಂದು ವರ್ಷದ ಅವಧಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 09 ಸಸಪ್ರ 2011, ಬೆಂಗಳೂರು, ದಿನಾಂಕ : 11–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಆದೇಶದ ಅನುಬಂಧದಲ್ಲಿ ತೋರಿಸಿರುವ ರಾಜ್ಯದ 29 ಜಿಲ್ಲಾ ಪಂಚಾಯತ್‌ಗಳ ಯೋಜನಾ ಘಟಕದಲ್ಲಿರುವ ಈ ಕೆಳಕಂಡ 394 ತಾತ್ಕಾಲಿಕ ಯೋಜನೇತರ ಹುದ್ದೆಗಳನ್ನು ದಿನಾಂಕ: 01/04/2011 ರಿಂದ 31/03/2012 ವರೆಗೆ (ಎ.ದಿ.ಸೇ.) ಮತ್ತೊಂದು ವರ್ಷದ ಅವಧಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | | |
|---|---|---|---|
| 1. | ಮುಖ್ಯ ಯೋಜನಾಧಿಕಾರಿಗಳು | – | 29 |
| 2. | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನ ಅಧೀಕಾರಿ | – | 29 |
| 3. | ತಾಲ್ಲೂಕು ಯೋಜನಾಧಿಕಾರಿಗಳು | – | 63+43 |
| 4. | ಯೋಜನಾ ಸಹಾಯಕರು (ಆರ್ಥಿಕ) | – | 27 |
| 5. | ಯೋಜನಾ ಸಹಾಯಕರು (ಸಾಂಖ್ಯಿಕ) | – | 25 |
| 6. | ಪ್ರಥಮ ದರ್ಜೆ ಸಹಾಯಕರು | – | 28 |
| 7. | ದ್ವಿತೀಯ ದರ್ಜೆ ಸಹಾಯಕರು | – | 37 |
| 8. | ಶೀಘ್ರಲಿಪಿಗಾರರು | – | 29 |
| 9. | ಬೆರಳಚ್ಚುಗಾರರು | – | 32 |
| 10. | ದಲಾಯತ್ | – | 52 |
| | ಒಟ್ಟು | – | 394 |

ಜಿಲ್ಲಾ ಪಂಚಾಯತ್‌ವಾರು ಯೋಜನಾ ಘಟಕಗಳಲ್ಲಿ ಮುಂದುವರಿಸಿದ ತಾತ್ಕಾಲಿಕ ಹುದ್ದೆಗಳ ವಿವರಗಳ ಈ ಆದೇಶದ ಅನುಬಂಧದಲ್ಲಿ ನೀಡಲಾಗಿದೆ. ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 3451–00–101–4–00 ಜಿಲ್ಲಾ ಪಂಚಾಯತ್ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

**ಸರ್ಕಾರಿ ಆದೇಶ ಸಂ. ಯೋಇ 9 ಸಸಪ್ರ 2011, ಬೆಂಗಳೂರು, ದಿನಾಂಕ: 11–07–2011ರ ಅನುಬಂಧ**

| ಕ್ರ. ಸಂ | ಜಿಲ್ಲೆಗಳು | ಮುಖ್ಯ ಯೋಜನಾಧಿಕಾರಿ | ಪಿಎ ಇಒ | ತಾಲ್ಲೂಕು ಯೋಜನಾಧಿಕಾರಿಗಳು | ಯೋಜನಾ ಸಹಾಯಕರು ಆರ್ಥಿಕ | ಯೋಜನಾ ಸಹಾಯಕರ ು ಸಾಂಖ್ಯಿಕ | ಪ್ರ.ದ.ಸ | ದ್ವಿ.ದ.ಸ | ಶೀಘ್ರ ಲಿಪಿ ಗಾರರು | ಬೆರ ಳಚ್ಚು ಗಾರರು | ದಲಾಯತ್ |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಬೆಂಗಳೂರು (ನಗರ) | 1 | 1 | 1 | 1 | 1 | – | 1 | 1 | 1 | 1 |
| 2 | ಬೆಂಗಳೂರು (ಗ್ರಾ) | 1 | 1 | 1 | 1 | 1 | 1 | 3 | 1 | 1 | 2 |
| 3 | ಚಿತ್ರದುರ್ಗ | 1 | 1 | 5 | 1 | 1 | 1 | 2 | 1 | 1 | 3 |
| 4 | ಶಿವಮೊಗ್ಗ | 1 | 1 | 2 | 1 | 1 | 1 | 2 | 1 | 1 | 3 |
| 5 | ತುಮಕೂರು | 1 | 1 | 8 | 1 | 1 | 1 | 1 | 1 | 1 | 2 |
| 6 | ಕೋಲಾರ | 1 | 1 | 5 | 1 | 1 | 1 | 1 | 1 | 1 | 2 |
| 7 | ಚಿಕ್ಕಮಗಳೂರು | 1 | 1 | 2 | 1 | 1 | 1 | 2 | 1 | 1 | 3 |
| 8 | ದಕ್ಷಿಣ ಕನ್ನಡ | 1 | 1 | 1 | 1 | 1 | 1 | 1 | 1 | 1 | 1 |
| 9 | ಕೊಡುಗು | 1 | 1 | 2 | 1 | 1 | 1 | 1 | 1 | 1 | 2 |
| 10 | ಮೈಸೂರು | 1 | 1 | 4 | 1 | 1 | 1 | 2 | 1 | 1 | 3 |
| 11 | ಹಾಸನ | 1 | 1 | 3 | 1 | 1 | 1 | 2 | 1 | 2 | 3 |
| 12 | ಮಂಡ್ಯ | 1 | 1 | 3 | 1 | 1 | 1 | 2 | 1 | 1 | 2 |

| | | | | | | | | | | | |
|---|---|---|---|---|---|---|---|---|---|---|---|
| 13 | ಗುಲ್ಬರ್ಗ | 1 | 1 | 9–3=6+1* | 1 | 1 | 1 | 2 | 1 | 2 | 3 |
| 14 | ಬೀದರ್ | 1 | 1 | 4 | 1 | 1 | 1 | 3 | 1 | 2 | 2 |
| 15 | ಬಳ್ಳಾರಿ | 1 | 1 | 5 | 1 | 1 | 1 | 1 | 1 | 1 | 2 |
| 16 | ರಾಯಚೂರು | 1 | 1 | 5 | 1 | 1 | 1 | – | – | 1 | 1 |
| 17 | ಬೆಳಗಾವಿ | 1 | 1 | 7 | 1 | 1 | 1 | 2 | 1 | 2 | 2 |
| 18 | ಬಿಜಾಪುರ | 1 | 1 | 5 | 1 | 1 | 1 | 1 | 1 | 1 | 1 |
| 19 | ಉತ್ತರ ಕನ್ನಡ | 1 | 1 | 4 | 1 | 1 | 1 | 1 | 1 | 1 | 3 |
| 20 | ಧಾರವಾಡ | 1 | 1 | 3 | 1 | 1 | 1 | 1 | 1 | 1 | 2 |
| 21 | ಚಾಮರಾಜನಗರ | 1 | 1 | 3 | 1 | 1 | 1 | 1 | 1 | 1 | 1 |
| 22 | ಬಾಗಲಕೋಟೆ | 1 | 1 | 3 | 1 | 1 | 1 | 1 | 1 | 1 | 1 |
| 23 | ಕೊಪ್ಪಳ | 1 | 1 | 4 | 1 | – | 1 | – | 1 | 1 | 1 |
| 24 | ದಾವಣಗೆರೆ | 1 | 1 | 4 | – | 1 | 1 | – | 1 | 1 | 1 |
| 25 | ಉಡುಪಿ | 1 | 1 | 1 | 1 | – | 1 | – | 1 | 1 | 1 |
| 26 | ಹಾವೇರಿ | 1 | 1 | 6 | 1 | – | 1 | – | 1 | 1 | 1 |
| 27 | ಗದಗ | 1 | 1 | 3 | 1 | – | 1 | – | 1 | 1 | 1 |
| 28 | ರಾಮನಗರ | 1 | 1 | 2 | – | 1 | 1 | 3 | 2 | – | 1 |
| 29 | ಯಾದಗಿರಿ | 1 | 1 | 3* | 1 | 1 | 1 | 1 | 1 | 1 | 1 |
| | ಒಟ್ಟು | 29 | 29 | 63+43=106 | 27 | 25 | 28 | 37 | 29 | 32 | 52 |

ಟಿಪ್ಪಣಿ: ಗುಲ್ಬರ್ಗ ಜಿಲ್ಲಾ ಪಂಚಾಯತ್ ಯೋಜನಾ ಘಟಕದಲ್ಲಿರುವ 9 ತಾಲ್ಲೂಕು ಯೋಜನಾಧಿಕಾರಿಗಳ ಹುದ್ದೆಗಳ ಪೈಕಿ 3 ತಾಲ್ಲೂಕು ಯೋಜನಾಧಿಕಾರಿಗಳ ಹುದ್ದೆಗಳನ್ನು ಮರುಹೊಂದಾಣಿಕೆಯ ಮೂಲಕ ಯಾದಗಿರಿ ಜಿಲ್ಲಾ ಪಂಚಾಯತ್‌ಗೆ ವರ್ಗಾವಣೆಯಾಗಿರುತ್ತದೆ.

**ಬಿ.ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 1760

## ಶಿಕ್ಷಣ ಸಚಿವಾಲಯ

**ವಿಷಯ :** ಬೆಂಗಳೂರಿನ ಸರ್ಕಾರಿ ಕೇಂದ್ರ ಮುದ್ರಣಾಲಯದಲ್ಲಿ ವಯೋ ನಿವೃತ್ತಿ ಹೊಂದಿ ಕಾಣೆಯಾಗಿರುವ ಶ್ರೀ ಚಿಕ್ಕಣ್ಣ ಇವರ ಪತ್ನಿ ಶ್ರೀಮತಿ ಜಯಮ್ಮ ಇವರಿಗೆ ಕುಟುಂಬ ವಿಶ್ರಾಂತಿ ವೇತನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ:23–09–2010ರ ಶ್ರೀಮತಿ ಜಯಮ್ಮ ಇವರ ಮನವಿ

2) ದಿನಾಂಕ: 21–03–1988ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ/87

3) ದಿನಾಂಕ : 05–04–2011ರ ಸರ್ಕಾರಿ ಮುದ್ರಣಾಲಯ ನಿರ್ದೇಶಕರ ಪತ್ರ ಸಂಖ್ಯೆ:ಡಿಪಿಎಸ್/ಪಿಂಚಣಿ/191/2011–12.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಮನವಿಯಲ್ಲಿ ಶ್ರೀಮತಿ ಜಯಮ್ಮ ಇವರು ತನ್ನ ಪತಿ ಶ್ರೀ ಚಿಕ್ಕಣ್ಣ ಬಿನ್ ಗಾಳಪ್ಪ ಇವರು ದಿನಾಂಕ 8–1–2007ರಿಂದ ಕಾಣೆಯಾಗಿದ್ದು, ಈ ಬಗ್ಗೆ ನೆಲಮಂಗಲ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಲಾಗಿ ಸದರಿಯವರನ್ನು ಹುಡುಕಲು ಮಾಡಿದ ಪ್ರಯತ್ನ ವಿಫಲವಾಗಿದೆಯೆಂದು ಪೊಲೀಸ್ ಇಲಾಖೆಯು ದಿನಾಂಕ 20–12–2009 ರಂದು ಸಲ್ಲಿಸಿರುವ ವರದಿಯನ್ವಯ ತನಗೆ ಪಿಂಚಣಿ ಮಂಜೂರು ಮಾಡಿಕೊಡುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಕಾಣೆಯಾದ ಪೆನ್‌ಷನ್‌ದಾರರ ಕುಟುಂಬಕ್ಕೆ ಪೆನ್‌ಷನ್‌ದಾರರು ಕಣ್ಮರೆಯಾದ ದಿನಾಂಕದಿಂದ ಒಂದು ವರ್ಷದ ಅವಧಿಯು ಕಳೆದ ಬಳಿಕ ಅಂತಹ ನೌಕರರು ಮಾಡಿರುವ ನಾಮ ನಿರ್ದೇಶನವನ್ನು ಗಮನದಲ್ಲಿಟ್ಟುಕೊಂಡು ಕುಟುಂಬ ವಿಶ್ರಾಂತಿ ವೇತನವನ್ನು ಮಂಜೂರು ಮಾಡಲು ಅವಕಾಶವನ್ನು ಕಲ್ಪಿಸಿದೆ.

ಮೇಲೆ (3)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ ರವರು ಸರ್ಕಾರಿ ಮುದ್ರಣ ಇಲಾಖೆಯಲ್ಲಿ ಶ್ರೀ ಚಿಕ್ಕಣ್ಣ ಎಂಬುವರು ಹೆಡ್ ಕ್ಯಾಸ್ಟರ್ ಆಗಿ ದಿನಾಂಕ 19–8–1996ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರ ಪತ್ನಿಯಾದ ಶ್ರೀಮತಿ ಜಯಮ್ಮ ಎಂಬುವರು ದಿನಾಂಕ 2–2–2011 ರಂದು ಮನವಿಯೊಂದನ್ನು ಸಲ್ಲಿಸಿ ತನ್ನ ಪತಿಯು ದಿನಾಂಕ 8–1–2007 ರಿಂದ ಕಾಣೆಯಾಗಿರುತ್ತಾರೆಂದು ತಿಳಿಸಿರುತ್ತಾರೆ. ಈ ಸಂಬಂಧ ನೆಲಮಂಗಲ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದು ಪತ್ತೆಯಾಗಿರುವುದಿಲ್ಲವೆಂದು ಪೊಲೀಸರು ವರದಿ ನೀಡಿರುವುದಾಗಿ ತಿಳಿಸಲಾಗಿದೆ. ಪ್ರಕರಣವನ್ನು ವಿವರವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 208 ಇಎಸ್‌ಡಬ್ಲ್ಯೂ 2010, ಬೆಂಗಳೂರು, ದಿನಾಂಕ:12-7-2011**

ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಹೆಡ್ ಕ್ಯಾಸ್ಟರ್ ಆಗಿ ವಯೋ ನಿವೃತ್ತಿ ಹೊಂದಿರುವ ಶ್ರೀ ಚಿಕ್ಕಣ್ಣ ರವರು ದಿನಾಂಕ: 8-1-2007 ರಿಂದ ಕಾಣೆಯಾಗಿರುವ ಹಿನ್ನೆಲೆಯಲ್ಲಿ ದಿನಾಂಕ 21-3-1988ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ 87 ರಲ್ಲಿನ ಷರತ್ತಿಗೊಳಪಟ್ಟು ಶ್ರೀಮತಿ ಜಯಮ್ಮ ಕೋಂ ಚಿಕ್ಕಣ್ಣ ಇವರಿಗೆ ಲಭ್ಯವಾಗುವ ಕುಟುಂಬ ವಿಶ್ರಾಂತಿ ವೇತನ ಹಾಗೂ ಬಾಕಿ ಇರುವ ಪೆನ್‌ಷನ್ ಮೊಬಲಗನ್ನು ಪಾವತಿ ಮಾಡಲು ಸರ್ಕಾರವು ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಅ.ಟಿ. ಸಂಖ್ಯೆ: ಆಇ(ವಿ) 112 ಪಿಇಎನ್-1/2011 ದಿನಾಂಕ: 30-5-2011 ರಲ್ಲಿ ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)ಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ.ಸಸಾಲಟ್ಟಿ**

ಪಿ.ಆರ್.1761

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ)

ಶಿಕ್ಷಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಜಿ.ಎಂ. ರವೀಂದ್ರ, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರು ಮರುಸ್ಥಳ ನಿಯುಕ್ತಿಗಾಗಿ ನಿರೀಕ್ಷಿಸಿದ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:** 1) ಸಂಖ್ಯೆ ಸಇ 118 ಎಸಸೇ 2011 ದಿನಾಂಕ 27-4-2011ರ ಅಧಿಸೂಚನೆ.

2) ಕ್ರಮ ಸಂಖ್ಯೆ ವಾಕೈ 45 ಸಸಕಾ 2011, ದಿನಾಂಕ 24-5-2011ರ ಅಧಿಸೂಚನೆ

3) ದಿನಾಂಕ 30-5-2011ರ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ.) ರವರ ಪತ್ರ

4) ಅಧಿಸೂಚನೆ ಸಂಖ್ಯೆ ವಾಕೈ 45 ಸಸಕಾ 2011, ದಿನಾಂಕ 10-6-2011.

5) ಅಧಿಸೂಚನೆ ಸಂಖ್ಯೆ ಸಇ 186 ಎಸಸೇ 2011 ದಿನಾಂಕ 10-6-2011.

6) ಶ್ರೀ ಜಿ.ಎಂ. ರವೀಂದ್ರ, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರ ದಿನಾಂಕ 14-6-2011ರ ಮನವಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿನ ದಿನಾಂಕ 27-4-2011ರ ಅಧಿಸೂಚನೆಯಲ್ಲಿ ಸಹಕಾರ ಇಲಾಖೆಯು ಶ್ರೀ ಜಿ.ಎಂ.ರವೀಂದ್ರ, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರನ್ನು ದಿ ಮಾರ್ಕೆಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಖಾಲಿ ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ನೀಡಿರುತ್ತದೆ. ಈ ಆದೇಶದನ್ವಯ ಶ್ರೀ ಜಿ.ಎಂ. ರವೀಂದ್ರರವರು ದಿನಾಂಕ 2-5-2011ರಂದು ಪೂರ್ವಾಹ್ನ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಕರ್ತವ್ಯ ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2)ರಲ್ಲಿನ ದಿನಾಂಕ 24-5-2011ರ ಅಧಿಸೂಚನೆಯಲ್ಲಿ ಜಿ.ಎಂ. ರವೀಂದ್ರ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ. ಹುಬ್ಬಳ್ಳಿ ಇಲ್ಲಿಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತದವರು ಶ್ರೀ ಜಿ.ಎಂ. ರವೀಂದ್ರ ರವರ ಸೇವೆಯನ್ನು ಹಿಂದಕ್ಕೆ ಪಡೆಯುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (4)ರಲ್ಲಿನ ದಿನಾಂಕ 10-6-2011ರ ಅಧಿಸೂಚನೆಯಲ್ಲಿ ಶ್ರೀ ಜಿ.ಎಂ. ರವೀಂದ್ರರವರನ್ನು ಮುಂದಿನ ಆದೇಶದವರೆಗೆ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಇಲ್ಲಿನ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿ ನೀಡಿ ಮುಂದುವರೆಸಲಾಗಿದೆ.

ಮೇಲೆ (5)ರಲ್ಲಿ ಓದಲಾಗಿರುವ ದಿನಾಂಕ 10-6-2011ರ ಅಧಿಸೂಚನೆಯಲ್ಲಿ ಸಹಕಾರ ಇಲಾಖೆಯು ಶ್ರೀ ಜಿ.ಎಂ. ರವೀಂದ್ರ ಸಹಕಾರ ಸಂಘಗಳ ಜಂಟಿ ನಿಬಂಧಕರ ಸೇವೆಯನ್ನು ಹಿಂದಕ್ಕೆ ಪಡೆದಿರುತ್ತದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ 14-6-2011ರ ಮನವಿಯಲ್ಲಿ ಶ್ರೀ ಜಿ.ಎಂ. ರವೀಂದ್ರ, ಸಹಕಾರ ಸಂಘಗಳ ಜಂಟಿ ನಿಬಂಧಕರು ಇವರು ದಿನಾಂಕ 2-5-2011ರಿಂದ 13-6-2011ರವರೆಗೆ ಇಲಾಖೆಯಲ್ಲಿ ಮರು ಸ್ಥಳ ನಿಯುಕ್ತಿಗಾಗಿ ನಿರೀಕ್ಷಿಸಿದ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಘೋಷಣೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 45 ಸಸಕಾ 2011, ಬೆಂಗಳೂರು, ದಿನಾಂಕ 12-7-2011.**

ಶ್ರೀ ಜಿ.ಎಂ. ರವೀಂದ್ರ ಜಂಟಿ ನಿಬಂಧಕರು ಸಹಕಾರ ಇಲಾಖೆರವರು ದಿನಾಂಕ 2-5-2011 ರಿಂದ 10-6-2011ರವರೆಗೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಸ್ಥಳ ನಿಯುಕ್ತಿ ನಿರೀಕ್ಷೆಯಲ್ಲಿದ್ದ ಅವಧಿಯನ್ನು (ಎರಡೂ ದಿನಗಳು ಸೇರಿ) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 8(15)(ಎಫ್) ಪ್ರಕಾರ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1762

**ಬಿ.ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

## ಕಂದಾಯ ಸಚಿವಾಲಯ

**ವಿಷಯ :** ಅಮಾನತ್ತಿನಲ್ಲಿರುವ ಶ್ರೀ ಕೆ. ರಮೇಶ್, ಶಾಖಾಧಿಕಾರಿ, ಭೂ ಸ್ವಾಧೀನ-1 ಶಾಖೆ ಮತ್ತು ಶ್ರೀ ಮಲ್ಲಿಕಾರ್ಜುನ ರಾಮಚಂದ್ರಪ್ಪ, ಸಹಾಯಕರು, ಭೂ ಸ್ವಾಧೀನ-1 ಶಾಖೆ, ಕಂದಾಯ ಇಲಾಖೆ ಇವರುಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪನೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ:ಕಂಇ 174 ಸಮಿತಿ 2011 ದಿನಾಂಕ 30-6-2011.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ತಿಳಿಸಿರುವ ಕರ್ತವ್ಯ ನಿರ್ಲಕ್ಷತೆ ಹಾಗೂ ದುರ್ನಡತೆಗಾಗಿ ಶ್ರೀ ಕೆ.ರಮೇಶ್, ಶಾಖಾಧಿಕಾರಿ, ಭೂ ಸ್ವಾಧೀನ-1 ಶಾಖೆ ಮತ್ತು ಶ್ರೀ ಮಲ್ಲಿಕಾರ್ಜುನ ರಾಮಚಂದ್ರಪ್ಪ, ಸಹಾಯಕರು, ಭೂ ಸ್ವಾಧೀನ-1 ಶಾಖೆ, ಕಂದಾಯ ಇಲಾಖೆ ಇವರುಗಳನ್ನು ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡಲಾಗಿರುತ್ತದೆ.

ಶ್ರೀ ಮಲ್ಲಿಕಾರ್ಜುನ ರಾಮಚಂದ್ರಪ್ಪ, ಸಹಾಯಕರು, ಭೂ ಸ್ವಾಧೀನ-1 ಶಾಖೆ, ಕಂದಾಯ ಇಲಾಖೆ ಇವರು ದಿನಾಂಕ 5-7-2011ರಂದು ಮನವಿ ಸಲ್ಲಿಸಿ ತಾವು ಶಾಖೆಗೆ ಬಂದಾಗಿನಿಂದ ತಮ್ಮ ಕರ್ತವ್ಯಗಳನ್ನು ಯಾವುದೇ ದೂರುಗಳಿಗೆ ಅವಕಾಶವಿಲ್ಲದಂತೆ ಪ್ರಾಮಾಣಿಕವಾಗಿ ನಿರ್ವಹಿಸುತ್ತಾ ಬಂದಿರುವುದಾಗಿ ಹಾಗೂ ತಮಗೆ ತೀವ್ರ ಕೌಟುಂಬಿಕ ಸಮಸ್ಯೆಗಳು ಇದ್ದು, ಅವುಗಳನ್ನು ಪರಿಗಣಿಸಿ ಅಮಾನತ್ತನ್ನು ತೆರವುಗೊಳಿಸುವಂತೆ ಕೋರಿರುತ್ತಾರೆ. ದಿನಾಂಕ 30-6-2011ರ ಸರ್ಕಾರಿ ಆದೇಶದಲ್ಲಿ ತಿಳಿಸಿರುವ ನ್ಯಾಯಾಲಯ ಪ್ರಕರಣಗಳು ಇನ್ನೂ ಇತ್ಯರ್ಥಗೊಳ್ಳದೆ ನ್ಯಾಯಾಲಯದಲ್ಲಿ ಬಾಕಿ ಇರುತ್ತವೆ.

ಈ ಹಿನ್ನೆಲೆಯಲ್ಲಿ ಸರ್ಕಾರಿ ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಅವರ ಅಮಾನತ್ತನ್ನು ತೆರವುಗೊಳಿಸಿ ಸರ್ಕಾರಿ ಸೇವೆಯಲ್ಲಿ ಪುನರ್ ಸ್ಥಾಪನೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 174 ಸಮಿತಿ 2011, ಬೆಂಗಳೂರು, ದಿನಾಂಕ:11ನೇ ಜುಲೈ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಅಶೋಕ್‌ಕುಮಾರ್ ಸಿ. ಮನೋಲಿ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಆದ ನಾನು ಶ್ರೀ ಕೆ. ರಮೇಶ್, ಶಾಖಾಧಿಕಾರಿ, ಭೂ ಸ್ವಾಧೀನ-1 ಶಾಖೆ ಮತ್ತು ಶ್ರೀ ಮಲ್ಲಿಕಾರ್ಜುನ ರಾಮಚಂದ್ರಪ್ಪ, ಸಹಾಯಕರು, ಭೂ ಸ್ವಾಧೀನ-1 ಶಾಖೆ, ಕಂದಾಯ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಅಮಾನತ್ತು ಆದೇಶವನ್ನು ಹಿಂತೆಗೆದುಕೊಂಡು, ತಕ್ಷಣದಿಂದ ಜಾರಿಗೆ ಬರುವಂತೆ, ಸೇವೆಯಲ್ಲಿ ಪುನರ್ ಸ್ಥಾಪನೆ ಮಾಡಿ ಆದೇಶಿಸಿರುತ್ತೇನೆ.

ಇವರ ಸ್ಥಳನಿಯುಕ್ತಿ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಶೋಕ್‌ಕುಮಾರ್ ಸಿ. ಮನೋಲಿ**

ಪಿ.ಆರ್.1763

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕಂದಾಯ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್. ಟಂಕಸಾಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೈಲಹೊಂಗಲ ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 56 ಪಿಪಿಇ 99 , ದಿನಾಂಕ:12-01-2000
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 493 ಪಿಪಿಇ 2007, ದಿನಾಂಕ:17-12-2007
3) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ ಸಿಶಾ:1(ಎ)/53/2010-11, ದಿನಾಂಕ:8-12-2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ 8 ರನ್ವಯ ಶ್ರೀ ಎಂ.ಎಸ್. ಟಂಕಸಾಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ,ಬೈಲಹೊಂಗಲ ಇವರು ಸಹಾಯಕ ಸರ್ಕಾರಿ ಅಬಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 21-01-2000ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀ ಎಂ.ಎಸ್. ಟಂಕಸಾಲಿ ಇವರ ಪರಿವೀಕ್ಷಣಾವಧಿಯನ್ನು ದಿನಾಂಕ 21-1-2003ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ 18-12-2010ರ ಪತ್ರದಲ್ಲಿ, ಮಹಾಲೇಖಪಾಲರಿಂದ ಶ್ರೀ ಎಂ.ಎಸ್. ಟಂಕಸಾಲಿ ಇವರ ಸೇವಾ ವಿವರಗಳನ್ನು ಪಡೆಯಲಾಗಿದ್ದು, ಇವರು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ದಿನಾಂಕ 21-01-2000ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿದ್ದು, ದಿನಾಂಕ 20-01-2010ಕ್ಕೆ 10 ವರ್ಷಗಳ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಪೂರೈಸಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಪರೀಕ್ಷಣಾವಧಿಯನ್ನು ಘೋಷಿಸಿರುವುದರಿಂದ, ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ ಅಥವಾ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ, ಅನಧಿಕೃತ ಗೈರು ಹಾಜರಾಗಿರುವುದಿಲ್ಲ ಹಾಗೂ ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ. ಈ ಹಿಂದೆ ಬಡ್ತಿಯನ್ನು ನೀಡಿರುವುದಿಲ್ಲ ಅಥವಾ ಸದರಿ ಅಧಿಕಾರಿಯು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಸದರಿ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡುವ ಸಂಭವವಿರುವುದಿಲ್ಲ ಹಾಗೂ ಯಾವುದೇ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವುದಿಲ್ಲ. ದಿನಾಂಕ 21-01-2010ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ

ಇರುವುದಿಲ್ಲ.ಹೀಗಾಗಿ ಸದರಿಯವರು ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂ:ಎಫ್‌ಡಿ 1 ಎಸ್‌ಆರ್ ಪಿ 85, ದಿನಾಂಕ 22–01–1985ರಲ್ಲಿ ವಿಧಿಸಿರುವ ನಿಬಂಧನೆಗಳನ್ನು ಪೂರೈಸಿದ್ದು, ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಅರ್ಹರಿರುತ್ತಾರೆ. ಆದ್ದರಿಂದ ಶ್ರೀ ಎಂ.ಎಸ್. ಟಂಕಸಾಲಿ ಇವರಿಗೆ ದಿನಾಂಕ 21–01–2010ರಿಂದ ಜಾರಿಗೆ ಬರುವಂತೆ ರೂ.12,000–22,650ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 424 ಪಿಪಿಇ 2010, ಬೆಂಗಳೂರು, ದಿನಾಂಕ:11ನೇ ಜುಲೈ 2011.**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ಎಸ್. ಟಂಕಸಾಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೈಲಹೊಂಗಲ ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೇ 10 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿರುವುದರಿಂದ ದಿನಾಂಕ 21–01–2010ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು 1983 ಮತ್ತು ಸರ್ಕಾರದ ಅಧಿಸೂಚನೆ ಸಂ: ಎಫ್‌ಡಿ 17 ಎಸ್‌ಆರ್‌ಪಿ 2007, ದಿನಾಂಕ:16–05–2007ರ ನಿಯಮ 4(3) ಮತ್ತು 15ರನ್ವಯ ರೂ.11,400–21,600 ವೇತನ ಶ್ರೇಣಿಯಿಂದ ರೂ.12,000–22,650ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ.ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

ಪಿ.ಆರ್.1764

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಹೊರರಾಜ್ಯದ ಕನ್ನಡಿಗರಿಗೆ ಉನ್ನತ ವ್ಯಾಸಂಗಕ್ಕಾಗಿ ಪ್ರವೇಶ ಪಡೆಯಲು ಅವಕಾಶ ಕಲ್ಪಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಕಂದಾಯ:ಬಿಎಡಿಎಫ್/2011–12, ದಿನಾಂಕ: 22–06–2011.

2) ದಿನಾಂಕ 4–7–2011 ರಂದು ಮಾನ್ಯ ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಜವಳಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ರಾಯಚೂರು ಜಿಲ್ಲೆಯ ಗಡಿಗೆ ಹೊಂದಿಕೊಂಡಂತೆ ಆಂಧ್ರಪ್ರದೇಶ ರಾಜ್ಯದ ಮೆಹಬೂಬನಗರ ಜಿಲ್ಲೆಯ 13 ಗ್ರಾಮಗಳಲ್ಲಿ ಕನ್ನಡ ಶಾಲೆಗಳಿಗೆ ಅಗತ್ಯ ಕನ್ನಡ ಮಾಧ್ಯಮದ ಪಠ್ಯಪುಸ್ತಕಗಳು ಲಭ್ಯವಿಲ್ಲದ ಪ್ರಯುಕ್ತ ಗಡಿ ಪ್ರದೇಶ ವಿದ್ಯಾರ್ಥಿಗಳು ಕನ್ನಡ ಮಾಧ್ಯಮ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆಂದು ಮತ್ತು ಕನ್ನಡ ಶಾಲೆಗಳಿಗೆ ಬೀಗ ಹಾಕಲಾಗುತ್ತಿದೆ ಎಂದು ಸುದ್ದಿಗಳು ಪ್ರಕಟವಾಗಿರುವ ಹಿನ್ನೆಲೆಯಲ್ಲಿ ಸದರಿ 13 ಗ್ರಾಮಗಳನ್ನು ಕರ್ನಾಟಕ ಸರ್ಕಾರದ ವತಿಯಿಂದ ಗಡಿ ಪ್ರದೇಶ ಹೊರನಾಡು ಕನ್ನಡ ಗ್ರಾಮಗಳೆಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಅವಶ್ಯಕತೆ ಇರುತ್ತದೆ. ಇದರಿಂದ ಹೊರನಾಡು ಕನ್ನಡಿಗರಿಗೆ ಉನ್ನತ ಶೈಕ್ಷಣಿಕ ವ್ಯಾಸಾಂಗ, ತಾಂತ್ರಿಕ ಶಿಕ್ಷಣಕ್ಕಾಗಿ ಪ್ರವೇಶ ಪಡೆಯಲು ಮತ್ತು ಇತರೆ ಸಂಬಂಧಿತ ಸೌಲಭ್ಯ ಪಡೆಯಲು ಅನುಕೂಲವಾಗುತ್ತದೆಂದು, ಈ ಕುರಿತು ಕ್ರಮವಹಿಸುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ರಾಯಚೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಕೋರಿಕೆಯ ಬಗ್ಗೆ ದಿನಾಂಕ 4–7–2011 ರಂದು ಮಾನ್ಯ ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಜವಳಿ ಸಚಿವರ ಅಧ್ಯಕ್ಷತೆಯಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ, ಸಮಾಜ ಕಲ್ಯಾಣ ಇಲಾಖೆ, ಕಾನೂನು ಇಲಾಖೆ ಹಾಗೂ ಇನ್ನಿತರ ಸಂಬಂಧಪಟ್ಟ ಇಲಾಖೆಗಳ ಪ್ರತಿನಿಧಿಗಳ ಉಪಸ್ಥಿತಿಯಲ್ಲಿ ನಡೆದ ಸಭೆಯಲ್ಲಿ ಸಮಗ್ರವಾಗಿ ಪರಿಶೀಲಿಸಿ, ಭಾರತ ದೇಶದ ಯಾವುದೇ ಭಾಗದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದ ಅಭ್ಯರ್ಥಿಗಳಿಗೆ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ, ಡಿಪ್ಲೋಮಾ ಕೋರ್ಸ್‌ಗಳ ಕಾಲೇಜುಗಳಲ್ಲಿ, ತಾಂತ್ರಿಕ ಸಂಸ್ಥೆಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಪ್ರವೇಶ ಪಡೆಯಲು ಅವಕಾಶ ಕಲ್ಪಿಸುವಂತೆ ಆದೇಶ ಹೊರಡಿಸಲು ಸದರಿ ಸಭೆಯಲ್ಲಿ ಸರ್ವಾನುಮತದಿಂದ ನಿರ್ಣಯಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 73 ಕೆಓಎಲ್ 2011 (ಭಾ–1), ಬೆಂಗಳೂರು, ದಿನಾಂಕ:13–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭಾರತ ದೇಶದ ಯಾವುದೇ ಭಾಗದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ, ಓದಿದ ಅಭ್ಯರ್ಥಿಗಳಿಗೆ ಪದವಿ ಪೂರ್ವ ಕಾಲೇಜುಗಳಲ್ಲಿ, ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ, ಡಿಪ್ಲೋಮಾ ಕೋರ್ಸ್‌ಗಳ ಕಾಲೇಜುಗಳಲ್ಲಿ, ತಾಂತ್ರಿಕ ಸಂಸ್ಥೆಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಹಾಗೂ ಇನ್ನಿತರೆ ವೃತ್ತಿಪರ ಕೋರ್ಸ್‌ಗಳಿಗೆ ಗಡಿನಾಡು/ಹೊರನಾಡು ಕನ್ನಡಿಗರ ಮೀಸಲಾತಿ ಅಡಿಯಲ್ಲಿ ಪ್ರವೇಶ ಪಡೆಯಲು ಅವಕಾಶ ಕಲ್ಪಿಸಿ, ಆದೇಶಿಸಿದೆ.

ಈ ಅಂಶದ ಬಗ್ಗೆ ಸಂಬಂಧಿತ ಇಲಾಖೆಗಳು ಸಂಬಂಧಪಟ್ಟ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್.1765

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆ ವಿಭಾಗ)ದಲ್ಲಿನ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2004, ದಿನಾಂಕ: 23–12–2004.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 30 ಸಸಿವಿ 2006, ದಿನಾಂಕ : 7–6–2006.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 607 ಸಅಸೇ 2008, ದಿನಾಂಕ : 23–1–2009.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 60 ಸಅಸೇ 2010, ದಿನಾಂಕ : 19–8–2010.
5. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 68 ಚುಸಿಆ 2003, ದಿನಾಂಕ : 22–3–2011.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಪ್ರೋಗ್ರಾಮರ್ ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 23–12–2004ರ ಸರ್ಕಾರಿ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆ) ಇಲ್ಲಿನ ಜ್ಯೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಸೀನಿಯರ್ ಪ್ರೋಗ್ರಾಮರ್ ಹುದ್ದೆಗೆ ಉನ್ನತೀಕರಿಸಲಾಗಿದೆ ಹಾಗೂ ಮೇಲೆ ಕ್ರಮ ಸಂಖ್ಯೆ (2) ರಿಂದ (3) ರಲ್ಲಿನ ಆದೇಶಗಳಲ್ಲಿ ಸದರಿ ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ : 1–4–2010 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆ) ವಿಭಾಗದಲ್ಲಿನ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ : 1–4–2011 ರಿಂದ 31–3–2012 ರವರೆಗೆ ಮುಂದುವರೆಸುವಂತೆ ಹಾಗೂ ಸದರಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎನ್. ರಾಜು ಇವರನ್ನು ನಿಯೋಜನೆ ಮೇಲೆ ಮುಂದುವರೆಸುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 227 ಸಅಸೇ 2011, ಬೆಂಗಳೂರು, ದಿನಾಂಕ : 14ನೇ ಜುಲೈ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಚುನಾವಣೆ ವಿಭಾಗದಲ್ಲಿನ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ : 1–4–2011 ರಿಂದ 1 ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 734 ಸೇವೆಗಳು–1/2011, ದಿನಾಂಕ : 6–6–2011 ಹಾಗೂ ಸಿ.ಆ.ಸು.ಇ. (ಸೇವಾ ನಿಯಮಗಳು) ವಿಭಾಗದ ಟಿಪ್ಪಣಿ ಸಂಖ್ಯೆ : ಸಿಆಸುಇ 163 ಸೇನಿಎ 2011, ದಿನಾಂಕ : 4–5–2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

ಪಿ.ಆರ್. ನಂ. 1766

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಅಧೀನ ಕಾರ್ಯದರ್ಶಿ, (ವಾರ್ತಾ) ಕನ್ನಡ ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಹುದ್ದೆಗೆ ಪೂರಕ ಸಿಬ್ಬಂದಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 580 ಸಅಸೇ 2010, ದಿನಾಂಕ : 1–12–2010.
2. ಅಧೀನ ಕಾರ್ಯದರ್ಶಿ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆರವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಸಂವಾಪ್ರ 253 ಸ್ವೀಮರ 2010, ದಿನಾಂಕ : 5–4–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕನ್ನಡ ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿ ಹೊಸದಾಗಿ ಅಧೀನ ಕಾರ್ಯದರ್ಶಿ (ವಾರ್ತಾ) ಹುದ್ದೆ ಸೃಜಿಸಲಾಗಿದೆ. ಈ ಹುದ್ದೆಗೆ ಹೊಂದಿಕೊಂಡಂತೆ ಒಂದು ಶೀಘ್ರ ಲಿಪಿಗಾರರ ಹುದ್ದೆಯನ್ನು ಸೃಜಿಸುವಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿದೆ. ಈ ಬಗ್ಗೆ ಪರಿಶೀಲಿಸಿ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 221 ಸಅಸೇ 2011, ಬೆಂಗಳೂರು, ದಿನಾಂಕ : 13–7–2011**

ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿನ ಅಧೀನ ಕಾರ್ಯದರ್ಶಿ (ವಾರ್ತಾ) ಹುದ್ದೆಗೆ ಪೂರಕವಾಗಿ ಒಂದು ಶೀಘ್ರಲಿಪಿಗಾರರ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 525 ವೆಚ್ಚ 12/2011, ದಿನಾಂಕ : 17–6–2011 ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3).

ಪಿ.ಆರ್. ನಂ. 1767

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಚಿಕ್ಕೋಡಿ ಪಟ್ಟಣಕ್ಕೆ ಅಂದಾಜು ರೂ. 50.00 ಕೋಟಿಗಳ ವೆಚ್ಚದಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ: ವ್ಯ.ನಿ/ಮುಅ(ಉ)/ಅಶ್ರೇಕಾಅ(ಜಿ)/ಉಮುಅ–2/ತಾಸ–1/3679/2010–11, ದಿನಾಂಕ : 21–1–2011.

2. ಸರ್ಕಾರದ ಆದೇಶ ಸಂಖ್ಯೆ : ನಅಇ 4 ಯುಡಿಎಸ್ 2010, ದಿನಾಂಕ : 31–3–2011.

**ಪ್ರಸ್ತಾವನೆ :**

ಚಿಕ್ಕೋಡಿ ಪಟ್ಟಣವು ಬೆಳಗಾಂ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿ ಪ್ರಕಾರ 31,820 ಆಗಿದ್ದು, ಪ್ರಸ್ತುತ 38,970 ಆಗಿರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2042ರ ವೇಳೆಗೆ 63,485 ಆಗಬಹುದೆಂದು ಅಂದಾಜಿಸಲಾಗಿದೆ.

ಪ್ರಸ್ತುತ ಈ ಪಟ್ಟಣಕ್ಕೆ ಕೃಷ್ಣ ನದಿ ಮೂಲದಿಂದ 2ನೇ ಹಂತದ ನೀರು ಸರಬರಾಜು ಯೋಜನೆಯಡಿ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯು ಇರುವುದಿಲ್ಲ. ಹೆಚ್ಚಿನ ಜನಸಂಖ್ಯೆಯು ಇಂಗುತೊಟ್ಟಿ ಮತ್ತು ಆಳಗುಂಡಿಗಳನ್ನು ತೋಡಿಕೊಂಡಿದ್ದು, ಕಲ್ಮಶ ನೀರನ್ನು ನಾಲೆಗಳ ಮತ್ತು ಚರಂಡಿಗಳ ಮೂಲಕ ಹರಿದು ಬಿಡುತ್ತಿರುವ ಕಾರಣ ಜನಗಳ ಆರೋಗ್ಯದ ಮೇಲೆ ಪ್ರಭಾವ ಬೀರುತ್ತಿದೆ. ಇದಲ್ಲದೆ ಪರಿಸರ ಮಾಲಿನ್ಯವಾಗುತ್ತಿದ್ದು, ಜನಗಳ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟು ಮಾಡುತ್ತಿದೆ.

ಆದ್ದರಿಂದ, ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು 2042ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ ಯೋಜನೆಯನ್ನು ವಿನ್ಯಾಸಿಸಿ, 2010–11ನೇ ಸಾಲಿನ ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ ದರಪಟ್ಟಿ ಆಧರಿಸಿ ರೂ. 5000–00 ಲಕ್ಷಗಳಿಗೆ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಆಡಳಿತಾತ್ಮಕ ಅನುಮೋದನೆ ಕೋರಿ ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

| | | | |
|---|---|---|---|
| 1. | ಸರ್ಕಾರದ ಸಾಲ (ಶೇ. 30) | : | ರೂ. 1500.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಯಿಂದ ಸಾಲ (ಶೇ. 50) | : | ರೂ. 2500.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆಯ ವಂತಿಕೆ (ಶೇ 20) | : | ರೂ. 1000.00 ಲಕ್ಷಗಳು |
| | ಒಟ್ಟು | : | ರೂ. 5000.00 ಲಕ್ಷಗಳು |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಯೋಜನೆಯನ್ನು 2010–11ನೇ ಆರ್ಥಿಕ ಸಾಲಿನಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ, ಸಚಿವ ಸಂಪುಟದ ಅನುಮೋದನೆ ನಿರೀಕ್ಷಿಸಿ ಯೋಜನೆಗೆ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮಂಡಳಿಯು ಸಲ್ಲಿಸಿರುವ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ, ಯೋಜನೆಯ ಅಂದಾಜು ವೆಚ್ಚದಲ್ಲಿ ಮಂಡಳಿಯು ಇ.ಟಿ.ಪಿ., ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ. 15 ರಂತೆ ವಿಧಿಸಿದ್ದು, ಸದರಿ ವೆಚ್ಚಗಳನ್ನು ಶೇ 5 ಕ್ಕೆ ಮಿತಿಗೊಳಿಸಲು ಸರ್ಕಾರವು ನಿರ್ಧರಿಸಿ, ಅದರಂತೆ ಯೋಜನಾ ವೆಚ್ಚದಲ್ಲಿ ರೂ. 346.70 ಲಕ್ಷಗಳನ್ನು ಕಡಿತಗೊಳಿಸಿ ರೂ. 173.35 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ. ಇದಲ್ಲದೆ, ಸದರಿ ಯೋಜನೆಗೆ ತಗಲಬಹುದಾದ ಎಸ್ಕಲೇಷನ್ ದರದ ಮೊತ್ತವಾದ ರೂ. 416.03 ಲಕ್ಷಗಳ ಮೊತ್ತವನ್ನು ಸ್ಥಳೀಯ ಸಂಸ್ಥೆಯೇ ಭರಿಸಬೇಕಾಗಿರುವುದರಿಂದ, ಸದರಿ ಮೊತ್ತವನ್ನು ಯೋಜನೆಯ ಅಂದಾಜು ಮೊತ್ತದಿಂದ ಕಡಿತಗೊಳಿಸಬೇಕಾಗಿರುತ್ತದೆ. ಇದರಿಂದ ಯೋಜನೆಯ ಒಟ್ಟು ಅಂದಾಜು ಮೊತ್ತದಲ್ಲಿ ರೂ. 762.73 ಲಕ್ಷಗಳನ್ನು ಕಡಿತಗೊಳಿಸಿ ಅಂದಾಜು ಮೊತ್ತವನ್ನು ರೂ. 5000.00 ದಿಂದ ರೂ. 4237.27 ಲಕ್ಷಗಳಿಗೆ ಮಿತಿಗೊಳಿಸಿ ಅನುಮೋದಿಸಬೇಕಾಗಿರುತ್ತದೆ.

ಈ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ 2010–11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಪ್ರವರ್ಗ 'ಡಿ' ರಡಿ ಸೇರಿಸಿ, ರೂ. 1666.67 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 04 ಯುಡಿಎಸ್ 2011, ಬೆಂಗಳೂರು, ದಿನಾಂಕ : 11–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 4237.27 ಲಕ್ಷಗಳಲ್ಲಿ (ರೂ. ನಾಲ್ಕು ಸಾವಿರದ ಇನ್ನೂರ ಮೂವತ್ತೇಳು ಲಕ್ಷ ಇಪ್ಪತ್ತೇಳು ಸಾವಿರ ಮಾತ್ರ) ಯೋಜನೆಯನ್ನು ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned CMC. The estimate is reduced to such extent.
2. ETP & contingencies are restricted to 5%.
3. Resolution of the Local body to bear the project cost should be sought and if any deviations and extra item works or variations should be taken up only after the consent of the Urban Local Body with a condition for the commitment of the ULB for the extra cost.
4. Adequate provision to be made by the Board in the following Years for timely completion of the Project.
5. Escalations and Tender premium should be approved with the prior consent of the ULB.
6. Water rates as proposed by KUWS&DB have to be implemented to meet O & M cost.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 90 Exp-9: 2011, ದಿನಾಂಕ : 5–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. ನಂ. 1768

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ತುಂಗಭದ್ರಾ ನದಿ ಮೂಲದಿಂದ ಹೊನ್ನಾಳಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಯೋಜನೆಯ ರೂ. 550.20 ಲಕ್ಷಗಳ ಪರಿಷ್ಕೃತ ಅಂದಾಜಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 561 ಗ್ರಾನೀಸ(4) 2001, ದಿನಾಂಕ : 26–6–2002.
2. ಸರ್ಕಾರದ ಆದೇಶ ಸಂಖ್ಯೆ : ನಅಇ 86 ಯುಡಬ್ಲ್ಯೂಎಸ್ 2005, ದಿನಾಂಕ : 22–11–2006.
3. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ:ಮುಅ/ಅಶ್ರೇಕಾಅ–1/ತಾಸ–8/ಹೊನೀಸಯೋ/2219/2009–10, ದಿನಾಂಕ : 19–2–2010.

**ಪ್ರಸ್ತಾವನೆ :**

ಹೊನ್ನಾಳಿ ಪಟ್ಟಣಕ್ಕೆ ನೀರು ಸರಬರಾಜು ಮಾಡುವ ಯೋಜನೆಯನ್ನು ಮೂಲತಃ ಜಿಲ್ಲಾ ಪಂಚಾಯಿತಿ ದಾವಣಗೆರೆ ವತಿಯಿಂದ ಕೈಗೆತ್ತಿಕೊಳ್ಳಲಾಗಿದ್ದು, ದಿನಾಂಕ : 7–2–2002ರ ಪತ್ರದನ್ವಯ ಸದರಿ ಯೋಜನೆಯನ್ನು ಕನನೀಸ ಮತ್ತು ಒಚ ಮಂಡಳಿಗೆ ವರ್ಗಾಯಿಸಲು ತೀರ್ಮಾನಿಸಿ ಜಿಲ್ಲಾ ಪಂಚಾಯಿತಿಯು ಸರ್ಕಾರಕ್ಕೆ ಪತ್ರವನ್ನು ಬರೆದ ಹಿನ್ನೆಲೆಯಲ್ಲಿ ಸರ್ಕಾರವು ತನ್ನ ಆದೇಶ ಸಂಖ್ಯೆ : ಗ್ರಾಅಪ 561 ಗ್ರಾನೀಸ(4) 2001, ದಿನಾಂಕ : 26–6–2002ರ ಆದೇಶದಲ್ಲಿ ಯೋಜನೆಯ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಯೋಜನೆಯನ್ನು ವಹಿಸಿಕೊಡಲು ಅನುಮೋದನೆ ನೀಡಲಾಯಿತು. ಮಂಡಳಿಯು ದಿನಾಂಕ : 26–2–2003ರ ಪತ್ರದಲ್ಲಿ ಜಿಲ್ಲಾ ಪರಿಷತ್ ವತಿಯಿಂದ ಹೆಚ್ಚೇನೂ ಕೆಲಸಗಳು ಆಗಿರುವುದಿಲ್ಲದ ಕಾರಣ ಮತ್ತು ಉಳಿದ ಸಾಮಗ್ರಿಗಳು ಉಪಯೋಗಕ್ಕೆ ಬಾರದೇ ಇದ್ದುದರಿಂದ ಯೋಜನೆಯನ್ನು ಹೊಸದಾಗಿ ಕೈಗೆತ್ತಿಕೊಳ್ಳಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರೂ. 350 ಲಕ್ಷಗಳ ಯೋಜನೆಯನ್ನು ತಯಾರಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿತ್ತು.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ನಡೆದ ಅನೇಕ ಸಭೆಗಳಲ್ಲಿ ಚರ್ಚಿಸಿ ದಿನಾಂಕ : 3–1–2005 ರಂದು ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ವೆಚ್ಚಗಳ ಪರಿಶೀಲನಾ ಸಭೆಯಲ್ಲಿ ಚರ್ಚಿಸಿ ಮುಂದಿನ ಆರ್ಥಿಕ ವರ್ಷದಲ್ಲಿ ಯೋಜನೆಯನ್ನು ರಾಜ್ಯ ಸರ್ಕಾರದ ಶೇಕಡ 100 ರಷ್ಟು ಅನುದಾನ ನೀಡುವ ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ತೀರ್ಮಾನಿಸಲಾಯಿತು. ಅದರಂತೆ ಮಂಡಳಿಯು ದಿನಾಂಕ : 20–4–2005ರ ಪತ್ರದಲ್ಲಿ ಈ ಯೋಜನೆಯಡಿ 2031ಕ್ಕೆ ಅಂದಾಜಿಸಲಾದ 33,000 ಜನಸಂಖ್ಯೆಗೆ ತಲಾ ದಿನಂಪ್ರತಿ 70 ಎಲ್‌ಪಿಸಿಡಿ ನೀರು ಸರಬರಾಜು ಮಾಡಲು ವಿನ್ಯಾಸಿಸಿ ರೂ. 350 ಲಕ್ಷಗಳ ಅಂದಾಜು ತಯಾರಿಸಿ, ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ. ಸದರಿ ಯೋಜನೆಯನ್ನು ಮಂಡಳಿಯ 2006–07ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸೇರಿಸಿ, ಸರ್ಕಾರದ ಆದೇಶ ಸಂಖ್ಯೆ : ನಅಇ 86 ಯುಡಬ್ಲ್ಯೂಎಸ್ 2005 ದಿನಾಂಕ : 22–11–2006ರಲ್ಲಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಯಿತು.

ಈ ಯೋಜನೆಯನ್ನು ಆಗಸ್ಟ್ 2009 ರಲ್ಲಿ ಚಾಲನೆಗೊಳಿಸಿ ಪ್ರಸ್ತುತ ದಿನಂ ಪ್ರತಿ 3.10 ದಶಲಕ್ಷ ಲೀಟರ್ ನೀರನ್ನು ಪಟ್ಟಣಕ್ಕೆ ಸರಬರಾಜು ಮಾಡಲಾಗುತ್ತಿದೆ. ಸದರಿ ಯೋಜನೆಯನ್ನು ದಿನಾಂಕ 16–4–2010ರಂದು ಪಟ್ಟಣ ಪಂಚಾಯತಿಗೆ ಮುಂದಿನ ನಿರ್ವಹಣೆಗಾಗಿ ಹಸ್ತಾಂತರಿಸಲಾಗಿರುತ್ತದೆ. ಸದರಿ ಯೋಜನೆಯನ್ನು ಚಾಲನೆಗೊಳಿಸಲು ಒಟ್ಟು ರೂ. 550.20 ಲಕ್ಷಗಳಷ್ಟಾಗಿದ್ದು, ಇದು ಮೂಲ ಅಂದಾಜು ಮೊತ್ತವಾದ ರೂ. 350.00 ಲಕ್ಷಗಳಿಗಿಂತ ರೂ. 200.20 ಲಕ್ಷಗಳಷ್ಟು ಈ ಕೆಳಕಂಡ ಕಾರಣಗಳಿಗೆ ಹೆಚ್ಚಾಗಿರುತ್ತದೆ.

(ಎ) ಅನುಮೋದಿತ ಮೂಲ ಅಂದಾಜು ಪಟ್ಟಿಯನ್ನು 2002–03ನೇ ಸಾಲಿನ ದರಪಟ್ಟಿಯನ್ವಯ ತಯಾರಿಸಲಾಗಿದ್ದು, ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು 2006–07 ರಲ್ಲಿ (ದಿನಾಂಕ : 22–11–2006)ರಲ್ಲಿ ನೀಡಿದ್ದು, ಕಾಮಗಾರಿಯನ್ನು 2007–08ನೇ ಸಾಲಿನಲ್ಲಿ ಕೈಗೆತ್ತಿಕೊಳ್ಳಲಾಗಿದೆ ;

(ಬಿ) ಇದಲ್ಲದೆ, ಈ ಕೆಳಕಂಡ ಕಾರಣಗಳಿಗಾಗಿ ಅಂದಾಜನ್ನು ಪರಿಷ್ಕರಿಸಲಾಗಿದೆ ;

| | | | |
|---|---|---|---|
| ಅ. | ಮೂಲ ಅಂದಾಜು ಮೊತ್ತವು | : | ರೂ. 2,79,85,000 |
| ಆ. | ಇಬಿಆರ್‌ಎಲ್ ಮತ್ತು ವರ್ಕ್‌ಸ್ಲಿಪ್ | : | ರೂ. 56,25,827 |
| ಇ. | ಟೆಂಡರ್ ಪ್ರೀಮಿಯಂ | : | ರೂ. 78,98,642 |
| ಈ. | ದರಗಳ ಹೆಚ್ಚಳ (5 ವರ್ಷ) | : | ರೂ. 64,95,531 |
| ಉ. | ಇ.ಟಿ.ಪಿ., ಮತ್ತು ಸಾದಿಲ್ವಾರು ವೆಚ್ಚಗಳು | : | ರೂ. 70,15,000 |
| | ಒಟ್ಟು | : | ರೂ. 5,50,20,000 |

ಸದರಿ ಯೋಜನೆಯ ಇ.ಟಿ.ಪಿ. ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ. 5ಕ್ಕೆ ಮಿತಿಗೊಳಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಯೋಜನೆಯ ಪರಿಷ್ಕೃತ ಮೂಲ ಅಂದಾಜು ಮೊತ್ತವು ರೂ. 2,79,85,000.00 ರಿಂದ 4,78,36,918.00 ಕ್ಕೆ ಹೆಚ್ಚಿರುವುದರಿಂದ ಸದರಿ

ಮೊತ್ತಕ್ಕೆ ಶೇ. 5 ರಂತೆ ಇ.ಟಿ.ಪಿ., ಮತ್ತು ಸಾದಿಲ್ವಾರು ವೆಚ್ಚಗಳನ್ನು ವಿಧಿಸಿದ್ದಲ್ಲಿ ರೂ. 23,91,846.00 ಗಳಾಗುತ್ತದೆ. ಇದರಿಂದ ಒಟ್ಟು ಅಂದಾಜು ಮೊತ್ತವನ್ನು ರೂ. 5,02,28,764.00 ಗಳಿಗೆ ಮಿತಿಗೊಳಿಸಬೇಕಾಗಿದೆ.

ಯೋಜನೆಯನ್ನು ಈಗಾಗಲೇ ಕೊಳವೆ ನೀರು ಸರಬರಾಜು ಯೋಜನೆಯಡಿ ಅನುಮೋದಿಸಿರುವ ಪ್ರಯುಕ್ತ (ಶೇ. 100 ರಷ್ಟು ಸರ್ಕಾರದ ಅನುದಾನ) ಹೆಚ್ಚುವರಿ ಮೊತ್ತವಾದ ರೂ. 200.20 ಲಕ್ಷಗಳನ್ನು ಮಂಡಳಿಯ 2010–11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ರೂ. 500.00 ಲಕ್ಷಗಳ ಮೊತ್ತವನ್ನು ಅನುಷ್ಠಾನಗೊಳಿಸಿದ ಯೋಜನೆಗಳಿಗಾಗಿ ಪ್ರತ್ಯೇಕವಾಗಿ ನಿಗದಿಪಡಿಸಿದ್ದು, ಸದರಿ ಮೊತ್ತದಲ್ಲಿ ಈ ಮೊತ್ತವನ್ನು ಭರಿಸಬಹುದಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 31 ಯುಡಬ್ಲ್ಯೂಎಸ್ 2009, ಬೆಂಗಳೂರು, ದಿನಾಂಕ : 11–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಂಗಭದ್ರಾ ನದಿ ಮೂಲದಿಂದ ಹೊನ್ನಾಳಿ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜು ಯೋಜನೆಯನ್ನು ರೂ. 502.23 ಲಕ್ಷಗಳಲ್ಲಿ (ರೂ. ಐನೂರ ಎರಡು ಲಕ್ಷ ಇಪ್ಪತ್ತ ಮೂರು ಸಾವಿರ ಮಾತ್ರ) ಪರಿಷ್ಕೃತ ಅಂದಾಜಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. ETP & contingencies are restricted to 5%.
2. The consent of the ULB shall be obtained for the extra cost.
3. Water rates as proposed by KUWS & DB have to be implemented to meet O & M cost of UGD.
4. KTPP provisions, quality control and timely completion should ensured.
5. ಮಂಡಳಿಯು ಸದರಿ ಯೋಜನೆಯನ್ನು ಈ ಹಿಂದೆ ಜಿಲ್ಲಾ ಪಂಚಾಯತಿ ದಾವಣಗೆರೆ ವತಿಯಿಂದ ಯೋಜನೆಯನ್ನು ಮಂಡಳಿಗೆ ವರ್ಗಾಯಿಸುವ ಮುನ್ನ ನಡೆದ ಕಾಮಗಾರಿಗಳ ವಿವರಗಳು ಮತ್ತು ಖರೀದಿ ಮಾಡಿದ ಸಾಮಗ್ರಿಗಳ ಪಟ್ಟಿಯನ್ನು ಹಾಗೂ ಈ ಯೋಜನೆಯಡಿಯಲ್ಲಿ ಜಿಲ್ಲಾ ಪಂಚಾಯತಿ ಕಾರ್ಯವ್ಯಾಪ್ತಿಯಲ್ಲಿ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಕ್ರಮ ಕೈಗೊಂಡ ಕಡತವನ್ನು ಪರಿಶೀಲಿಸಿ ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಕಾನೂನು ರೀತಿ ಕ್ರಮ ಕೈಗೊಳ್ಳಲು ಅನುವಾಗುವಂತೆ ಪೂರ್ಣ ವರದಿಯನ್ನು ದಾಖಲೆಗಳ ಸಮೇತ ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 169 ಇಎಕ್ಸ್‌ಪಿ–9/2011, ದಿನಾಂಕ : 26–3–2011 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. ನಂ. 1769

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೊಪ್ಪ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ಮೊತ್ತ ರೂ. 1250.00 ಲಕ್ಷಗಳ ವೆಚ್ಚದಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ:ತಾಂತ್ರಿಕ/ಕೊಪ್ಪ–ಒ.ಚ.ಯೋ/3681/2010–11, ದಿನಾಂಕ : 21–1–2011.

2. ಸರ್ಕಾರದ ಆದೇಶ ಸಂಖ್ಯೆ : ನಅಇ 03 ಯುಡಿಎಸ್ 2010, ದಿನಾಂಕ : 31–3–2011.

**ಪ್ರಸ್ತಾವನೆ :**

ಕೊಪ್ಪ ಪಟ್ಟಣವು ಚಿಕ್ಕಮಗಳೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯ ಪ್ರಕಾರ 5113 ಇದ್ದು, ಪ್ರಸ್ತುತ ಜನಸಂಖ್ಯೆಯು 6000 ಇರುತ್ತದೆ.

ಕೊಪ್ಪ ಪಟ್ಟಣಕ್ಕೆ ತುಂಗಾ ನದಿಯಿಂದ ನೀರು ಸರಬರಾಜು ಮಾಡುತ್ತಿದ್ದು, ದಿನಂಪ್ರತಿ 1.66 ದಶಲಕ್ಷ ಲೀಟರ್ ಸಾಮರ್ಥ್ಯದ ನೀರು ಸರಬರಾಜು ಯೋಜನೆಯನ್ನು 2003ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. ಸದರಿ ಯೋಜನೆಯನ್ನು 2030ಕ್ಕೆ ನಿರೀಕ್ಷಿಸಿದ 8000 ಜನಸಂಖ್ಯೆಗೆ ವಿನ್ಯಾಸಿಸಿ, ಯೋಜನೆಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಡಿಸೆಂಬರ್ 10, 2009ರಲ್ಲಿ ಪೂರ್ಣಗೊಳಿಸಲಾಗಿದೆ. ಪ್ರಸ್ತುತ ಪಟ್ಟಣಕ್ಕೆ ತಲಾ ದಿನಂಪ್ರತಿ 135 ಲೀಟರಿನಂತೆ ನೀರು ಸರಬರಾಜು ಮಾಡುತ್ತಿದ್ದು, ನಿರ್ವಹಣೆಯನ್ನು ಕೊಪ್ಪ ಪಟ್ಟಣ ಪಂಚಾಯ್ತಿ ವತಿಯಿಂದ ಮಾಡಲಾಗುತ್ತಿದೆ.

ಕೊಪ್ಪ ಪಟ್ಟಣದಲ್ಲಿ ಹಾಲಿ ಯಾವುದೇ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಮನೆಗಳಿಂದ ಹಾಗೂ ಸಾರ್ವಜನಿಕ ಕಟ್ಟಡಗಳಿಂದ ವಿಸರ್ಜಿಸಲ್ಪಟ್ಟ ತ್ಯಾಜ್ಯ ನೀರು, ಮಳೆ ನೀರು ಎಲ್ಲವೂ ತೆರೆದ ಚರಂಡಿಗಳಲ್ಲಿ ಹರಿಯುತ್ತಿದ್ದು, ಪಟ್ಟಣದ ಪರಿಸರವು ಹಾಳಾಗುತ್ತಿದೆ. ಆದುದರಿಂದ, ಸದರಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆ. ಸದರಿ ಯೋಜನೆಯನ್ನು 2011–12ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.

2010–11ನೇ ಸಾಲಿನ ಮಂಡಳಿ, ಸಣ್ಣ ನೀರಾವರಿ ಇಲಾಖೆ, ಮೈಸೂರು ವೃತ್ತ ಹಾಗೂ ಹಾಸನ ವೃತ್ತದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ದರಪಟ್ಟಿಯಂತೆ ಅಂದಾಜು ರೂ. 1250.00 ಲಕ್ಷಗಳಿಗೆ ಯೋಜನೆಯನ್ನು ತಯಾರಿಸಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಮೇಲೆ ಓದಲಾದ ಕ್ರಮಾಂಕ (1) ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ. 50) | ರೂ. 625.00 ಲಕ್ಷಗಳು |
| ಸರ್ಕಾರದ ಸಾಲ (ಶೇ. 30) | ರೂ. 375.00 ಲಕ್ಷಗಳು |
| ಕೊಪ್ಪ ಪಟ್ಟಣ ಪಂಚಾಯ್ತಿ ವಂತಿಕೆ (ಶೇ. 20) | ರೂ. 250.00 ಲಕ್ಷಗಳು |
| ಒಟ್ಟು | ರೂ. 1250.00 ಲಕ್ಷಗಳು |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಯೋಜನೆಯನ್ನು 2010–11ನೇ ಸಾಲಿನ ಮಂಡಳಿಯ ಕ್ರಿಯಾ ಯೋಜನೆಯಲ್ಲಿ ಸೇರಿಸಿ ರೂ. 420.00 ಲಕ್ಷಗಳನ್ನು ಅನುವು ಮಾಡಲಾಗಿದೆ. ಯೋಜನೆಯನ್ನು 2010–11ನೇ ಆರ್ಥಿಕ ಸಾಲಿನಲ್ಲಿ ಕೈಗೆತ್ತಿಕೊಳ್ಳುವ ದೃಷ್ಟಿಯಿಂದ, ಸಚಿವ ಸಂಪುಟದ ಅನುಮೋದನೆ ಬಾಕಿ ಇರಿಸಿ ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸರ್ಕಾರವು ತಾತ್ವಿಕ ಅನುಮೋದನೆ ನೀಡಿದೆ. ಪ್ರಸ್ತುತ ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಬೇಕಾಗಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಯೋಜನೆಯ ಅಂದಾಜು ವೆಚ್ಚದಲ್ಲಿ ಮಂಡಳಿಯು ಇ.ಟಿ.ಪಿ., ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ. 15 ರಂತೆ ವಿಧಿಸಿದ್ದು, ಸದರಿ ವೆಚ್ಚಗಳನ್ನು ಶೇ. 5 ಕ್ಕೆ ಮಿತಿಗೊಳಿಸಲು ಸರ್ಕಾರವು ನಿರ್ಧರಿಸಿ, ಅದರಂತೆ ಯೋಜನಾ ವೆಚ್ಚದಲ್ಲಿ ರೂ. 90.21 ಲಕ್ಷಗಳನ್ನು ಕಡಿತಗೊಳಿಸಿ ರೂ. 45.11 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ. ಇದಲ್ಲದೆ, ಸದರಿ ಯೋಜನೆಗೆ ತಗಲಬಹುದಾದ ಎಸ್ಕಲೇಷನ್ ದರದ ಮೊತ್ತವಾದ ರೂ. 108.25 ಲಕ್ಷಗಳ ಮೊತ್ತವನ್ನು ಸ್ಥಳೀಯ ಸಂಸ್ಥೆಯೇ ಭರಿಸಬೇಕಾಗಿರುವುದರಿಂದ, ಸದರಿ ಮೊತ್ತವನ್ನು ಸಹ ಯೋಜನೆಯ ಅಂದಾಜು ಮೊತ್ತದಿಂದ ಕಡಿತಗೊಳಿಸಬೇಕಾಗಿರುತ್ತದೆ. ಇದರಿಂದ ಯೋಜನೆಯ ಒಟ್ಟು ಅಂದಾಜು ಮೊತ್ತದಲ್ಲಿ ರೂ. 198.46 ಲಕ್ಷಗಳನ್ನು ಕಡಿತಗೊಳಿಸಿ ಅಂದಾಜು ಮೊತ್ತವನ್ನು ರೂ. 1250.00 ರಿಂದ ರೂ. 1051.54 ಲಕ್ಷಗಳಿಗೆ ಮಿತಿಗೊಳಿಸಿ ಅನುಮೋದಿಸಬೇಕಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 03 ಯುಡಿಎಸ್ 2011, ಬೆಂಗಳೂರು, ದಿನಾಂಕ : 11–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 1051.54 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಐವತ್ತೊಂದು ಲಕ್ಷ ಐವತ್ತ ನಾಲ್ಕು ಸಾವಿರ ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate is reduced to such extent.
2. ETP & contingencies are restricted to 5%.
3. The consent of the ULB shall be obtained for the extra cost that might occur due to deviations, extra item works or variations in the Scheme.
4. Adequate provision to be made by the Board in the following Years for timely completion of the Project.
5. Escalations and Tender premium over and above the approved estimate cost should be approved with the prior consent of the ULB.
6. Water rates as proposed by KUWS&DB have to be implemented to meet O & M cost or UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : FD 89 Exp-9/2011, ದಿನಾಂಕ : 5–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. ನಂ. 1770

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹೊನ್ನಾಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 3000.00 ಲಕ್ಷಗಳಲ್ಲಿ ಕಲ್ಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :**
1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರುರವರ ಪತ್ರ ಸಂಖ್ಯೆ : ಕಜಮಂ:ಮುಅ/ಅಶ್ರೇಕಾಅ(ಬೆಂ)/ತಾಸ–8/ಸಅ–8/ಹೊ–ಒ.ಚ.ಯೋ/3756/2010–11, ದಿನಾಂಕ : 29–1–2011.
2. ಸರ್ಕಾರದ ಆದೇಶ ಸಂಖ್ಯೆ : ನಅಇ 01 ಯುಡಿಎಸ್ 2011, ದಿನಾಂಕ : 31–3–2011.

**ಪ್ರಸ್ತಾವನೆ :**

ಹೊನ್ನಾಳಿ ಪಟ್ಟಣವು ದಾವಣಗೆರೆ ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯ ಪ್ರಕಾರ 15,568 ಹಾಗೂ ಪ್ರಸ್ತುತ 16,450 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2026 ರಲ್ಲಿ 30,000 ಮತ್ತು 2041ರಲ್ಲಿ 45,000 ಆಗಬಹುದೆಂದು ಅಂದಾಜಿಸಲಾಗಿದೆ.

2. ಈ ಪಟ್ಟಣಕ್ಕೆ ತುಂಗಭದ್ರಾ ನದಿ ಮೂಲದಿಂದ 1996 ರಲ್ಲಿ ಜಿಲ್ಲಾ ಪಂಚಾಯತ್ ವತಿಯಿಂದ ಕಾರ್ಯಗತವಾದ 0.9 ಎಂ.ಎಲ್.ಡಿ., ಸಾಮರ್ಥ್ಯದ ಯೋಜನೆಯಿಂದ ಹಾಗೂ ತುಂಗಭದ್ರಾ ನದಿ ಮೂಲದಿಂದ 2009 ರಲ್ಲಿ ಚಾಲನೆಗೊಳಿಸಿದ 4.68 ಎಂ.ಎಲ್.ಡಿ., ಸಾಮರ್ಥ್ಯದ ನೀರು

ಸರಬರಾಜು ಯೋಜನೆಯಿಂದ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ. ಈ ಯೋಜನೆಯನ್ನು 2031ರಲ್ಲಿ ಅಂದಾಜಿಸಲಾದ 46,800 ಜನಸಂಖ್ಯೆಗೆ ತಲಾ ದಿನಂಪ್ರತಿ 100 ಲೀಟರ್‌ನಂತೆ ಸರಬರಾಜು ಮಾಡಲು ವಿನ್ಯಾಸಿಸಲಾಗಿದ್ದು, ಈ ಯೋಜನೆಯಿಂದ ಮತ್ತು ಕೊಳವೆ ಬಾವಿಗಳಿಂದ ಒಟ್ಟು ಸುಮಾರು 135 ಲೀಟರ್ ನೀರು ಸರಬರಾಜು ಮಾಡಬಹುದಾಗಿರುತ್ತದೆ. ಪ್ರಸ್ತುತ ನೀರು ಸರಬರಾಜು ನಿರ್ವಹಣೆಯನ್ನು ಪಟ್ಟಣ ಪಂಚಾಯತಿಯು ನಿರ್ವಹಿಸುತ್ತಿದೆ.

3. ಪ್ರಸ್ತುತ ಪಟ್ಟಣದಲ್ಲಿ ಯಾವುದೇ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಯವರು ಸೋಕ್ ಪಿಟ್‌ಗಳ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಕೆಲವು ಪ್ರದೇಶಗಳಲ್ಲಿ ಮಲಿನ ನೀರನ್ನು ತೆರೆದ ಚರಂಡಿಗಳಿಗೆ ಹರಿದು ಬಿಡುತ್ತಿದ್ದು, ನೈರ್ಮಲ್ಯ ಸಮಸ್ಯೆ ಉಂಟಾಗುತ್ತಿದ್ದು, ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿರುತ್ತದೆ. ಆದ್ದರಿಂದ, ಶಾಶ್ವತ ಪರಿಹಾರವನ್ನು ನೀಡುವ ಸಲುವಾಗಿ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅನಿವಾರ್ಯವಾಗಿರುತ್ತದೆ.

4. ಅದರಂತೆ, ಮಂಡಳಿಯು 2010–11ನೇ ಸಾಲಿನ ಮಂಡಳಿ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿಯನ್ನಾಧರಿಸಿ ರೂ. 3000.00 ಲಕ್ಷಗಳ ಅಂದಾಜಿನಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರು ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

| ಕ್ರಮ ಸಂಖ್ಯೆ | ವಿವರ | ಮೊತ್ತ |
|---|---|---|
| 1. | ಸರ್ಕಾರದಿಂದ ಸಾಲ (ಶೇ. 30) | ರೂ. 900.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ. 50) | ರೂ. 1500.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆ ಕೊಡುಗೆ (ಶೇ. 20) | ರೂ. 600.00 ಲಕ್ಷಗಳು |
| | ಒಟ್ಟು | ರೂ. 3000.00 ಲಕ್ಷಗಳು |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸದರಿ ಯೋಜನೆಯನ್ನು 2010–11ನೇ ಸಾಲಿನಲ್ಲಿ ಮಂಡಳಿಯು ಕೈಗೆತ್ತಿಕೊಳ್ಳಲು ಅನುವಾಗುವಂತೆ ತಾತ್ವಿಕವಾಗಿ ಅನುಮೋದನೆಯನ್ನು ನೀಡಿರುತ್ತದೆ. ಪ್ರಸ್ತುತ ಸದರಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಬೇಕಾಗಿರುತ್ತದೆ. ಪ್ರಸ್ತುತ ಸದರಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಬೇಕಾಗಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಯೋಜನೆಯ ಅಂದಾಜು ವೆಚ್ಚದಲ್ಲಿ ಮಂಡಳಿಯು ಇ.ಟಿ.ಪಿ., ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ. 15 ರಂತೆ ವಿಧಿಸಿದ್ದು, ಸದರಿ ವೆಚ್ಚಗಳನ್ನು ಶೇ. 5 ಕ್ಕೆ ಮಿತಿಗೊಳಿಸಲು ಸರ್ಕಾರವು ನಿರ್ಧರಿಸಿ, ಅದರಂತೆ ಯೋಜನಾ ವೆಚ್ಚದಲ್ಲಿ ರೂ. 234.36 ಲಕ್ಷಗಳನ್ನು ಕಡಿತಗೊಳಿಸಿ ರೂ. 117.18 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ. ಇದಲ್ಲದೆ, ಸದರಿ ಯೋಜನೆಗೆ ತಗಲಬಹುದಾದ ಎಸ್ಕಲೇಷನ್ ದರದ ಮೊತ್ತವಾದ ರೂ. 281.23 ಲಕ್ಷಗಳ ಮೊತ್ತವನ್ನು ಸ್ಥಳೀಯ ಸಂಸ್ಥೆಯೇ ಭರಿಸಬೇಕಾಗಿರುವುದರಿಂದ, ಸದರಿ ಮೊತ್ತವನ್ನು ಯೋಜನೆಯ ಅಂದಾಜು ಮೊತ್ತದಿಂದ ಕಡಿತಗೊಳಿಸಬೇಕಾಗಿರುತ್ತದೆ. ಇದರಿಂದ ಯೋಜನೆಯ ಒಟ್ಟು ಅಂದಾಜು ಮೊತ್ತದಲ್ಲಿ ರೂ. 515.59 ಲಕ್ಷಗಳನ್ನು ಕಡಿತಗೊಳಿಸಿ ಅಂದಾಜು ಮೊತ್ತವನ್ನು ರೂ. 3000.00 ದಿಂದ ರೂ. 2484.41 ಲಕ್ಷಗಳಿಗೆ ಮಿತಿಗೊಳಿಸಿ ಅನುಮೋದಿಸಬೇಕಾಗಿರುತ್ತದೆ.

ಈ ಯೋಜನೆಯನ್ನು ಮಂಡಳಿಯ 2010–11ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯ ಪ್ರವರ್ಗ–ಡಿ ಯಡಿಯಲ್ಲಿ ಸೇರಿಸಿ, ರೂ. 734.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 01 ಯುಡಿಎಸ್ 2011, ಬೆಂಗಳೂರು, ದಿನಾಂಕ : 11–7–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 2484.41 ಲಕ್ಷಗಳಲ್ಲಿ (ರೂ. ಎರಡು ಸಾವಿರದ ನಾಲ್ಕು ನೂರ ಎಂಭತ್ತನಾಲ್ಕು ಲಕ್ಷ ನಲವತ್ತೊಂದು ಸಾವಿರ ಮಾತ್ರ) ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ತಾತ್ವಿಕವಾಗಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate is reduced to such extent.
2. ETP & contingencies are restricted to 5%.
3. The consent of the ULB shall be obtained for the extra cost that might occur due to deviations, extra item works or variations in the Scheme.
4. Adequate provision to be made by the Board in the following Years for timely completion of the Project.
5. Escalations and Tender premium over and above the approved estimate cost should be approved with the prior consent of the ULB.
6. Water rates as proposed by KUWS&DB have to be implemented to meet O & M cost of UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗಧಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಈಆ 105 ಇಥಿ–9: 2011, ದಿನಾಂಕ : 4–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. ನಂ. 1771

## ಒಳಾಡಳಿತ ಸಚಿವಾಲಯ

**ವಿಷಯ:** ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಯಡಿ ಬಿಡುಗಡೆ ಮಾಡಿದ ಅನುದಾನದಲ್ಲಿ ಬಳಸಿಕೊಳ್ಳದೆ ಬಾಕಿ ಇರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 21011/65/09–ಪಿಎಂ–1. ದಿನಾಂಕ:08/03/2010.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಎಡಿಜಿಪಿ/ಟಿಟಿಎಂ/ಎಂಡಿಎನ್/Rev/1/2011–12, ದಿನಾಂಕ: 07/05/2011.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ: 08/03/2010ರ ಪತ್ರದಲ್ಲಿ ಕೇಂದ್ರ ಸರ್ಕಾರವು ಪೊಲೀಸ್ ಆಧುನೀಕರಣ ಯೋಜನೆಗೆ ಹಿಂದಿನ ಸಾಲಿನಲ್ಲಿ ಬಿಡುಗಡೆ ಮಾಡಿ ಬಳಕೆಯಾಗದೇ ಇರುವ ಅನುದಾನವನ್ನು ಕೇಂದ್ರ ಗೃಹ ಸಚಿವಾಲಯವನ್ನು ಸಂಪರ್ಕಿಸದೆ ರಾಜ್ಯ ಮಟ್ಟದ ಉನ್ನತಾಧಿಕಾರಿಗಳ ಸಮಿತಿಯ ಅನುಮೋದನೆ ಪಡೆದು ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯೊಡನೆ ಸಂಪರ್ಕಿಸಿ ಅನುದಾನ ಪಡೆಯುವಂತೆ ತಿಳಿಸಿರುತ್ತಾರೆ.

ಮೇಲೆ ಓದಲಾದ (2) ದಿನಾಂಕ: 07/05/2011ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಗೆ 2009–10 ಮತ್ತು 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಿ ಬಳಸಿಕೊಳ್ಳದ ಅನುದಾನ ಕ್ರಮವಾಗಿ ರೂ. 10.77 ಮತ್ತು 23.87 ಕೋಟಿಗಳು ಅಂದರೆ ಒಟ್ಟು ಮೊತ್ತ ರೂ. 34.64 ಕೋಟಿಗಳನ್ನು ಮರುಮೌಲ್ಯೀಕರಣಗೊಳಿಸಿ 2011–12ನೇ ಸಾಲಿನಲ್ಲಿ ಅನುಮೋದನೆಗೊಂಡ ಕಾಮಗಾರಿಗಳಿಗೆ ಬಳಸಿಕೊಳ್ಳಲು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–115–0–00–125 ಆಧುನೀಕರಣ ಇದರಡಿ ಒದಗಿಸಿರುವ ರೂ. 104.00 ಕೋಟಿಗಳ ಅನುದಾನದಲ್ಲಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಗೆ 2009–10 ಮತ್ತು 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಿ ಬಳಸಿಕೊಳ್ಳದೆ ಬಾಕಿ ಉಳಿದಿರುವ ಒಟ್ಟು ಮೊತ್ತ ರೂ. 34.64 ಕೋಟಿಗಳನ್ನು ಮರುಮೌಲ್ಯೀಕರಣಗೊಳಿಸಿಕೊಂಡು 2011–12ನೇ ಸಾಲಿನಲ್ಲಿ ಅನುಮೋದನೆಗೊಂಡ ಕಾಮಗಾರಿಗಳಿಗೆ ಬಳಸಿಕೊಳ್ಳಲು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 04/06/2011ರಂದು ನಡೆದ ರಾಜ್ಯ ಮಟ್ಟದ ಉನ್ನತಾಧಿಕಾರಿಗಳ ಸಮಿತಿ ಸಭೆಯಲ್ಲಿ ಅನುಮೋದನೆ ಪಡೆದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 07 ಪಿಎಫ್‌ಎಸ್ 2011 ಬೆಂಗಳೂರು, ದಿನಾಂಕ: 14/07/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2009–10 ಮತ್ತು 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಿ ಬಳಸಿಕೊಳ್ಳದ ಅನುದಾನ ಕ್ರಮವಾಗಿ ರೂ. 10.77 ಕೋಟಿ ಮತ್ತು 23.87 ಕೋಟಿಗಳು ಅಂದರೆ ಒಟ್ಟು ಮೊತ್ತ ರೂ. 34.64 ಕೋಟಿಗಳನ್ನು (ಮೂವತ್ನಾಲ್ಕು ಕೋಟಿ ಅರವತ್ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಮರುಮೌಲ್ಯೀಕರಣಗೊಳಿಸಿ 2011–12ನೇ ಸಾಲಿನಲ್ಲಿ ಅನುಮೋದಿತ ಕಾಮಗಾರಿಗಳಿಗೆ ಬಳಸಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–115–0–00–125 ಆಧುನೀಕರಣ (ಯೋಜನೇತರ) ಇದರಡಿಯಲ್ಲಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 204 ವೆಚ್ಚ–11/2011. ದಿನಾಂಕ: 11/07/2011ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್ 1772

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ:** ಒಳಾಡಳಿತ ಇಲಾಖೆಗೆ ಹೊಸದಾಗಿ ಮಂಜೂರು ಮಾಡಿರುವ ಉಪ ಕಾರ್ಯದರ್ಶಿ ಹಾಗೂ ಅಧೀನ ಕಾರ್ಯದರ್ಶಿಗಳು ನಿರ್ವಹಿಸಬೇಕಾದ ವಿಷಯ / ಕಾರ್ಯಭಾರ ಹಂಚಿಕೆಯ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 458 ಸಆಸೇ 2008. ದಿನಾಂಕ: 22–03–2011.
2) ಸರ್ಕಾರದ ಆದೇಶ ಸಂಖ್ಯೆ: ಒಇ12ಪಿಸಿಎನ್ 2011, ದಿನಾಂಕ: 21–05–2011
3) ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಇವರ ಟಿಪ್ಪಣಿ ಸಂಖ್ಯೆ: ಒಇ 89/ಕಾ/2011 ದಿನಾಂಕ: 12–07–2011

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ದಿನಾಂಕ: 22–03–2011ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಗ್ರೂಪ್–ಎ ಹುದ್ದೆಯಲ್ಲಿನ ಸೃಜನೆ ಹಾಗೂ ಉನ್ನತೀಕರಿಸಿ ಒಳಾಡಳಿತ ಇಲಾಖೆಗೆ ಒಂದು ಉಪಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಅಧಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ: 21–05–2011ರಲ್ಲಿ ಸರ್ಕಾರದ ಉಪ ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿ (ಪೊಲೀಸ್ ಸೇವೆಗಳು–ಬಿ) ಎಂದು ಪದನಾಮೀಕರಿಸಿ ಕಾರ್ಯವಿಷಯಗಳ ಮರುಹಂಚಿಕೆಯನ್ನು ಮಾಡಿ ಆದೇಶಿಸಲಾಗಿತ್ತು. ಮೇಲೆ ಓದಲಾದ (3)ರ ಟಿಪ್ಪಣಿಯಲ್ಲಿ ಒಳಾಡಳಿತ ಇಲಾಖೆಯ ಉಪಕಾರ್ಯದರ್ಶಿ (ಪೊಲೀಸ್

ಸಹಾಯಕ ಸೇವೆಗಳು) ನಿರ್ವಹಿಸುವ ವಿಷಯಗಳಿಗೆ ಸಂಬಂಧಿಸಿದಂತೆ ವಿಷಯ ಮರು ಹಂಚಿಕೆ ಮಾಡುವಂತೆ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ರವರು ಸೂಚಿಸಿರುತ್ತಾರೆ.

ಸದರಿ ಟಿಪ್ಪಣಿಯನ್ನು ಪರಿಶೀಲಿಸಿ ಅದರಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ12 ಪಿಸಿಎನ್ 2011, ಬೆಂಗಳೂರು, ದಿನಾಂಕ: 14-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಒಇ12ಪಿಸಿಎನ್ 2011, ದಿನಾಂಕ: 21-05-2011ಅನ್ನು ಭಾಗಶಃ ಮಾರ್ಪಡಿಸಿ ಒಳಾಡಳಿತ ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ (ಪೊಲೀಸ್ ಸಹಾಯಕ ಸೇವೆಗಳು) ಇವರಿಗೆ ಹಂಚಿಕೆ ಮಾಡಿದ ಸೆರೆಮನೆ ಮತ್ತು ಸಿನಿಮಾ ಶಾಖೆಯ ಕಾರ್ಯ ವಿಷಯವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗು ಮುಂದಿನ ಆದೇಶದವರೆಗೆ ಸರ್ಕಾರದ ಜಂಟಿ ಕಾರ್ಯದರ್ಶಿ, (ಕಾನೂನು ಮತ್ತು ಸುವ್ಯವಸ್ಥೆ) ಇವರಿಗೆ ಮರು ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್ 1773

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸಮನ್ವಯ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹೊಸ ಜಿಲ್ಲೆಯಾದ ಯಾದಗಿರ್ ಜಿಲ್ಲೆಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಯಾದಗಿರ್ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂ/ಜಿಯಾಜಿ/2011-12, ದಿನಾಂಕ: 10.05.2011.

**ಪ್ರಸ್ತಾವನೆ:**

ಹೊಸ ಜಿಲ್ಲೆಯಾದ ಯಾದಗಿರ್ ಜಿಲ್ಲೆಯಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು 2011-12ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4515-00-800-0-06-132(ಬಂಡವಾಳ ವೆಚ್ಚಗಳು) ಅಡಿ ₹40.00 ಕೋಟಿ, ಲೆಕ್ಕಶೀರ್ಷಿಕೆ 4515-00-800-0-06-422 (ವಿಶೇಷ ಘಟಕ ಯೋಜನೆ) ಅಡಿ ₹7.00 ಕೋಟಿ ಮತ್ತು ಲೆಕ್ಕಶೀರ್ಷಿಕೆ 4515-00-800-0-06-423 (ಗಿರಿಜನ ಉಪಯೋಜನೆ) ಅಡಿ ₹3.00 ಕೋಟಿ ಒಟ್ಟು ₹50.00 ಕೋಟಿಗಳನ್ನು ಒದಗಿಸಲಾಗಿದೆ. ಇದು ಯಾದಗಿರಿ ಜಿಲ್ಲೆಗೆ ಒಂದು ಬಾರಿಯ ಅನುದಾನವಾಗಿರುತ್ತದೆ. ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಯಾದಗಿರ್ ಇವರು ಸದರಿ ಮೊತ್ತದಲ್ಲಿ ಕೈಗೊಳ್ಳಲಾಗುವ ಕಾಮಗಾರಿಗಳ ಪಟ್ಟಿಯನ್ನು ಸಲ್ಲಿಸಿ ಸದರಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 17 ಹೈಕಮಂ 2011, ಬೆಂಗಳೂರು, ದಿನಾಂಕ: 12-07-2011.**

2011-12ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4515-00-800-0-06 ಅಡಿ ಒದಗಿಸಿರುವ ಅನುದಾನ ₹50.00 ಕೋಟಿಗಳಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ಕಾಮಗಾರಿಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಿದೆ.

**ಷರತ್ತುಗಳು:**

1. ಜಿಲ್ಲಾಧಿಕಾರಿಗಳು, ಯಾದಗಿರ್ ಇವರು ಸದರಿ ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಗಳನ್ನು ಅನುಷ್ಠಾನಾಧಿಕಾರಿಗಳಿಂದ ಸಿದ್ಧಪಡಿಸಿ ಸಕ್ಷಮ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಅಗತ್ಯ ತಾಂತ್ರಿಕ ಮಂಜೂರಾತಿ ಪಡೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮವನ್ನು ಪಾಲಿಸಿ ಅನುಷ್ಠಾನಗೊಳಿಸುವುದು.
2. ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಗಳನ್ನು ಸರ್ಕಾರಕ್ಕೆ ಕೂಡಲೇ ಸಲ್ಲಿಸುವುದು.
3. ಸದರಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿಗಳನ್ನು ಪ್ರತಿ ತಿಂಗಳು ಎಂಎಂಆರ್ ಸಭೆಯಲ್ಲಿ ಪರಿಶೀಲಿಸಲು ಎಂಪಿಕ್ ನಮೂನೆಯಲ್ಲಿ ಪ್ರಗತಿಯ ವಿವರಗಳನ್ನು ಕಡ್ಡಾಯವಾಗಿ ಸಲ್ಲಿಸುವುದು.
4. ಹಣ ವಿನಿಯೋಗ ಪ್ರಮಾಣ ಪತ್ರವನ್ನು ನಿಯತಕಾಲಿಕವಾಗಿ ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 265 ವೆಚ್ಚ:6/2011, ದಿನಾಂಕ: 25.05.2011 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ

ಮತ್ತು ಸಾಂಖ್ಯಿಕ ಇಲಾಖೆ

## ಅನುಬಂಧ

1. ಯಾದಗಿರಿ ವಿಧಾನ ಸಭಾ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು

| ಕ್ರ ಸಂ. | ಕಾಮಗಾರಿಯ ವಿವರಗಳು | ಅಂದಾಜು ಮೊತ್ತ (₹ಲಕ್ಷಗಳಲ್ಲಿ) | ಯೋಜನೆ ವಿವರ |
|---|---|---|---|
| 1 | ಯಾದಗಿರಿ ನಗರದ ಮುಸ್ಲಿಂ ಸಮಾಜದ ಮಹಿಳಾ ಕಲ್ಯಾಣ & ವಿವಿಧೋದ್ದೇಶಕ್ಕಾಗಿ ತರಬೇತಿ ಕಾರ್ಯಾಗಾರ ಕೇಂದ್ರದ ಕಟ್ಟಡ ನಿರ್ಮಾಣ. | 75.00 | |
| 2 | ಯಾದಗಿರಿ ನಗರದ ಬಡೆ ಖುರೇಶಿ ಸಮಾಜದ "ಸಮುದಾಯ ಭವನ" ನಿರ್ಮಾಣ | 25.00 | |
| 3 | ಯಾದಗಿರಿ ನಗರದ ಕೋಟಗರವಾಡಾದಲ್ಲಿ ಡಾ|| ಬಿ.ಆರ್. ಅಂಬೇಡ್ಕರ್ ಭವನ ನಿರ್ಮಾಣ. | 30.00 | ಎಸ್.ಸಿ.ಪಿ |
| 4 | ಯಾದಗಿರಿ ನಗರದ ಗುರುಭವನ (ಶಿಕ್ಷಕರಿಗಾಗಿ) ಕಟ್ಟಡ ನಿರ್ಮಾಣ. | 25.00 | ಎಸ್.ಸಿ.ಪಿ |
| 5 | ಯಾದಗಿರಿ ನಗರದಲ್ಲಿ " ಜಿಲ್ಲಾ ರಂಗಮಂದಿರ" ಕಟ್ಟಡ ನಿರ್ಮಾಣ. | 200.00 | ಎಸ್.ಸಿ.ಪಿ |
| 6 | ಯಾದಗಿರಿ ನಗರದಲ್ಲಿ " ಕನ್ನಡ ಭವನ" ಕಟ್ಟಡ ನಿರ್ಮಾಣ | 100.00 | |
| 7 | ಯಾದಗಿರಿ ನಗರದ ತಾಲ್ಲೂಕು ಕೇಂದ್ರದಲ್ಲಿ ಬ್ಯಾರಿಕೇಡಿಂಗ್, ಟ್ರಾಫಿಕ್ ಸಿಗ್ನಲ್, ಸಂಚಾರಿ ನಾಮಫಲಕಗಳ ನಿರ್ಮಾಣ. | 45.00 | |
| | **ಒಟ್ಟು** | **500.00** | |

2. ಗುರುಮಿಠಕಲ್ ವಿಧಾನಸಭಾ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು

| ಕ್ರ ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (₹ಲಕ್ಷಗಳಲ್ಲಿ) | ಯೋಜನೆಯ ವಿವರ |
|---|---|---|---|
| 1 | ಯಾದಗಿರಿ ತಾಲ್ಲೂಕಿನ ಬಾಡಿಯಾಳದಿಂದ ರಾಜ್ಯ ಗಡಿಯವರೆಗೆ (ಸೈದಾಪುರ ರೇಲ್ವೆ ಕ್ರಾಸ್ ) ರಸ್ತೆ ಸುಧಾರಣೆ ಹಾಗೂ ಸೇತುವೆ ನಿರ್ಮಾಣ. | 100.00 | |
| 2 | ಯಾದಗಿರಿ ತಾಲ್ಲೂಕಿನ ಎಸ್, ಹೆಚ್ 10 ರಿಂದ ಮುಧೋಳ-ಯಲಗೇರಾ ರಾಜ್ಯ ಗಡಿಯವರೆಗೆ ರಸ್ತೆ ಸುಧಾರಣೆ (ಸೈದಾಪುರ- ಬಾಡಿಯಾಳ) ಕಿ.ಮೀ 73.00 ರಿಂದ 76.00ರವರೆಗೆ. | 100.00 | |
| 3 | ಯಾದಗಿರಿ ತಾಲ್ಲೂಕಿನ ಕೊಂಕಲ್‌ದಿಂದ ಅರಕೇರಾ ರಸ್ತೆ ವಯಾ ಯಲ್ಹೇರಿ ರಸ್ತೆ ಕಿ.ಮೀ 1.60 ರಲ್ಲಿ ಸೇತುವೆ ನಿರ್ಮಾಣ. | 100.00 | |
| 4 | ಯಾದಗಿರಿ ತಾಲ್ಲೂಕಿನ ಯದ್ಲಾಪುರ ಗ್ರಾಮದಿಂದ ಗಾಜರಕೋಟ್ ಗ್ರಾಮದ ಸಂಪರ್ಕ ರಸ್ತೆಗೆ ಸೇತುವೆ ಮತ್ತು ರಸ್ತೆ ನಿರ್ಮಾಣ. (ಪ.ಜಾತಿ) | 50.00 | ಎಸ್.ಸಿ.ಪಿ |
| 5 | ಯಾದಗಿರಿ ತಾಲ್ಲೂಕಿನ ಹಿಮಲಾಪುರ ಗ್ರಾಮದ ಹಳೆ ಕತಿಬಿ ಹತ್ತಿರ ಅಣೆಕಟ್ಟು ನಿರ್ಮಾಣ | 25.00 | |
| 6 | ಯಾದಗಿರಿ ತಾಲ್ಲೂಕಿನ ಚಪೆಟ್ಲಾ ಗ್ರಾಮದ ಪ್ರೌಢಶಾಲೆಯಿಂದ ಹುಸೇನಪ್ಪ ಮನೆಯವರೆಗೆ ಒಳಚರಂಡಿ & ಸಿ.ಸಿ ರಸ್ತೆ ನಿರ್ಮಾಣ. (ಪ.ಜಾತಿ) | 15.00 | ಎಸ್.ಸಿ.ಪಿ |
| 7 | ಕಡ್ಲೂರು ಗ್ರಾಮದಿಂದ ಸೈದಾಪುರ ಮುಖ್ಯರಸ್ತೆಯವರೆಗೆ ಸೇತುವೆ ಹಾಗೂ ರಸ್ತೆ ನಿರ್ಮಾಣ | 45.00 | ಎಸ್.ಸಿ.ಪಿ |
| 8 | ಯಾದಗಿರಿ ತಾಲ್ಲೂಕಿನ ಜೀನಕೇರಾ- ಪಗಲಾಪುರ ರಸ್ತೆ 0.00 ಕಿ.ಮೀ 4.00 ಕಿ.ಮೀ ಸುಧಾರಣೆ. ಕೊಂಕಲ್ ನಿಂದ ಅರಕೇರಾ ರಸ್ತೆ ವಯಾ ಯಲ್ಹೇರಿ. | 15.00 | ಎಸ್.ಸಿ.ಪಿ |
| 9 | ಯಾದಗಿರಿ ತಾಲ್ಲೂಕಿನ ಬಮರಾಲದೊಡ್ಡಿಯಿಂದ ಕಡಚೂರು ಗ್ರಾಮದ ವರೆಗೆ ರಸ್ತೆ ನಿರ್ಮಾಣ. (ಪ.ಪಂಗಡ) | 20.00 | ಎಸ್.ಸಿ.ಪಿ |
| 10 | ಯಾದಗಿರಿ ತಾಲ್ಲೂಕಿನ ಬಳಿಚಕ್ರ ಗ್ರಾಮದಿಂದ ಹನುಮಾನ ಗುಡಿಯವರೆಗೆ ರಸ್ತೆ ಸುಧಾರಣೆ. (ಪ.ಪಂಗಡ) | 15.00 | ಎಸ್.ಸಿ.ಪಿ |
| 11 | ಯಾದಗಿರಿ ತಾಲ್ಲೂಕಿನ ಬೆಳಗೇರಾ ಕ್ರಾಸ್‌ದಿಂದ ಹೊನಗೇರಾ ಗ್ರಾಮದವರೆಗೆ ರಸ್ತೆ ಸುಧಾರಣೆ. | 10.00 | |
| 12 | ಯಾದಗಿರಿ ತಾಲ್ಲೂಕಿನ ಕಮಲನಗರ ತಾಂಡಾದಲ್ಲಿ ಒಳಚರಂಡಿ ಮತ್ತು ಸಿ.ಸಿ ರಸ್ತೆ ನಿರ್ಮಾಣ. (ಪ. ಜಾತಿ) | 5.00 | |
| | **ಒಟ್ಟು** | **500.00** | |

3. **ಶಹಪುರ ವಿಧಾನಸಭಾ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು**

| ಕ್ರ. ಸಂ. | ಕಾಮಗಾರಿಯ ವಿವರ | ಅಂದಾಜು ಮೊತ್ತ (₹ಲಕ್ಷಗಳಲ್ಲಿ) | ಯೋಜನೆಯ ವಿವರ |
|---|---|---|---|
| 1 | ಸುರಪುರ ತಾಲ್ಲೂಕಿನ ಕೆಂಭಾವಿ ಗ್ರಾಮದಲ್ಲಿ ಸಿ.ಸಿ ರಸ್ತೆ ಒಳಚರಂಡಿ ನಿರ್ಮಾಣಕ್ಕಾಗಿ. | 50.00 | |
| 2 | ದರ್ಶನಾಪುರ ಗ್ರಾಮದಲ್ಲಿ ಸಿ.ಸಿ ರಸ್ತೆ & ಒಳಚರಂಡಿ ನಿರ್ಮಾಣಕ್ಕಾಗಿ. | 50.00 | |
| 3 | ಗೋಗಿ.ಕೆ & ಗೋಗಿ.ಪಿ ಗ್ರಾಮದಲ್ಲಿ ಸಿ.ಸಿ ರಸ್ತೆ & ಒಳಚರಂಡಿ ನಿರ್ಮಾಣಕ್ಕಾಗಿ | 50.00 | |
| 4 | ಸಗರ ಗ್ರಾಮದಲ್ಲಿ ಸಿ.ಸಿ. ರಸ್ತೆ & ಒಳಚರಂಡಿ ನಿರ್ಮಾಣಕ್ಕಾಗಿ. | 30.00 | |
| 5 | ಸುರಪುರ ತಾಲ್ಲೂಕಿನ ನಗನೂರುದಿಂದ ಕಿರದಳ್ಳಿ ಗ್ರಾಮದಲ್ಲಿ ರಸ್ತೆ ನಿರ್ಮಾಣಕ್ಕಾಗಿ. | 40.00 | ಎಸ್.ಸಿ.ಪಿ |
| 6 | ಕೊಡಮನಹಳ್ಳಿ ಗ್ರಾಮದಿಂದ ಗುಲಬರ್ಗಾ ಮುಖ್ಯ ರಸ್ತೆಯವರೆಗೆ ಡಾಂಬರೀಕರಣಕ್ಕಾಗಿ. | 40.00 | ” |
| 7 | ದರ್ಶನಾಪುರದಿಂದ ಉಕ್ಕಿನಾಳದವರೆಗೆ ರಸ್ತೆ ನಿರ್ಮಾಣಕ್ಕಾಗಿ 0.00 ಕಿ.ಮೀ ದಿಂದ 2.00 ಕಿ.ಮೀ ವರೆಗೆ | 40.00 | ” |
| 8 | ಶಹಾಪುರ ಪಟ್ಟಣದಲ್ಲಿ ಸಿ.ಸಿ ರಸ್ತೆ ಮತ್ತು ಒಳಚರಂಡಿ ನಿರ್ಮಾಣಕ್ಕಾಗಿ ಪ್ಯಾಕೇಜ್–1 | 50.00 | ” |
| 9 | ಶಹಾಪುರ ಪಟ್ಟಣದಲ್ಲಿ ಸಿ.ಸಿ ರಸ್ತೆ ಮತ್ತು ಒಳಚರಂಡಿ ನಿರ್ಮಾಣಕ್ಕಾಗಿ ಪ್ಯಾಕೇಜ್–2 | 50.00 | ” |
| 10 | ಶಹಾಪುರ ಪಟ್ಟಣದಲ್ಲಿ ಸಿ.ಸಿ ರಸ್ತೆ ಮತ್ತು ಒಳಚರಂಡಿ ನಿರ್ಮಾಣಕ್ಕಾಗಿ ಪ್ಯಾಕೇಜ್–3 | 50.00 | |
| 11 | ಶಹಾಪುರ ಪಟ್ಟಣದಲ್ಲಿ ಸಿ.ಸಿ ರಸ್ತೆ ಮತ್ತು ಒಳಚರಂಡಿ ನಿರ್ಮಾಣಕ್ಕಾಗಿ ಪ್ಯಾಕೇಜ್–4 | 50.00 | |
| | **ಒಟ್ಟು** | **500.00** | |

4. **ಸುರಪುರ ವಿಧಾನಸಭಾ ಕ್ಷೇತ್ರದಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು**

| ಕ್ರ. ಸಂ. | ಕಾಮಗಾರಿಯ ವಿವರ | ಅಂದಾಜು ಮೊತ್ತ (₹ಲಕ್ಷಗಳಲ್ಲಿ) | ಯೋಜನೆಯ ವಿವರ |
|---|---|---|---|
| **1** | ನಾರಾಯಣಪುರದಲ್ಲಿ ಕ್ರಿಕೆಟ್ ಕ್ರೀಡಾಂಗಣ ನಿರ್ಮಾಣ | 100.00 | ಟಿ.ಎಸ್.ಪಿ |
| **2** | ಕೊಡೆಕಲ್‌ದಲ್ಲಿ ಕ್ರಿಕೆಟ್ ಕ್ರೀಡಾಂಗಣ ನಿರ್ಮಾಣ. | 50.00 | ಟಿ.ಎಸ್.ಪಿ |
| **3** | ನಾರಾಯಣಪುರದಲ್ಲಿ ಕುಡಿಯುವ ನೀರಿನ ಸೌಲಭ್ಯ | 50.00 | ಟಿ.ಎಸ್.ಪಿ |
| **4** | ಶೆಳ್ಳಗಿ ಗ್ರಾಮದಲ್ಲಿ ಚರಂಡಿ ಹಾಗೂ ಸಿ.ಸಿ ರಸ್ತೆ ನಿರ್ಮಾಣ | 50.00 | ಟಿ.ಎಸ್.ಪಿ |
| **5** | ಗುಂಡಲಗೇರಾ ಗ್ರಾಮದಲ್ಲಿ ಕುಡಿಯುವ ನೀರಿನ ಸೌಲಭ್ಯ ಒದಗಿಸುವುದು. | 50.00 | ಟಿ.ಎಸ್.ಪಿ |
| **6** | ಸುರಪುರ ಪಟ್ಟಣದಲ್ಲಿ ವಾಲ್ಮೀಕಿ ಭವನ ನಿರ್ಮಾಣ. | 50.00 | ಟಿ.ಎಸ್.ಪಿ |
| 7 | ಸುರಪುರ ಪಟ್ಟಣದಲ್ಲಿ ಅಂಬೇಡ್ಕರ್ ಭವನ ನಿರ್ಮಾಣ. | 50.00 | ಎಸ್.ಸಿ.ಪಿ |
| **8** | ಕಲ್ಲದೇವನಹಳ್ಳಿ ಗ್ರಾಮದಲ್ಲಿ ಕುಡಿಯುವ ನೀರಿನ ಸೌಲಭ್ಯ ಒದಗಿಸುವುದು. | 50.00 | |
| **9** | ಸುರಪುರ ತಾಲ್ಲೂಕು ಕೇಂದ್ರದಲ್ಲಿ ಬ್ಯಾರಿಕೇಡಿಂಗ್, ಸಿಗ್ನಲ್, ಸಂಚಾರಿ ನಾಮಫಲಕ ಇತ್ಯಾದಿ ವ್ಯವಸ್ಥೆಗಾಗಿ | 50.00 | |
| | **ಒಟ್ಟು** | **500.00** | |

5. **ಯಾದಗಿರಿ ಜಿಲ್ಲಾ ಕೇಂದ್ರದಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳ ವಿವರಗಳು:**

| ಕ್ರ ಸಂ. | ಕಾಮಗಾರಿಯ ವಿವರಗಳು | ಅಂದಾಜು ಮೊತ್ತ (₹ಲಕ್ಷಗಳಲ್ಲಿ) | ಯೋಜನೆಯ ವಿವರ |
|---|---|---|---|
| 1 | ಜಿಲ್ಲಾ ಸಂಕೀರ್ಣ ಕಟ್ಟಡ | 2000.00 | |
| 2 | ಯಾದಗಿರಿ ನಗರದಲ್ಲಿ ಉದ್ಯಾನವನ ಅಭಿವೃದ್ಧಿ | 125.00 | |
| 3 | ಯಾದಗಿರಿ ನಗರದಲ್ಲಿ ಕ್ರೀಡಾಂಗಣಕ್ಕೆ ಕಾಂಪೌಂಡ್ ಗೋಡೆ ನಿರ್ಮಾಣ. | 150.00 | |
| 4 | ಯಾದಗಿರಿ ನಗರದಲ್ಲಿ ಉರ್ದು ಹಾಲ್ ನಿರ್ಮಾಣ | 100.00 | |
| 5 | ಯಾದಗಿರಿ ನಗರದಲ್ಲಿ ಬಾಲಭವನ (ಮಿನಿ ಅಕ್ವೇರಿಯಂ ಸ್ಥಾಪನೆ) | 150.00 | |
| 6 | ಯಾದಗಿರಿ ನಗರದಲ್ಲಿ ಅಲ್ಪಸಂಖ್ಯಾತರ ಭವನ & ಜಿಲ್ಲೆಯಲ್ಲಿನ ವಕ್ಫ್ ಆಸ್ತಿಗಳ ಅಭಿವೃದ್ಧಿಗೆ (ಸಮುದಾಯ ಭವನ 50.00 ಲಕ್ಷ, ವಕ್ಫ್ ಕಛೇರಿ 25.00 ಲಕ್ಷ, ಮಳಿಗೆ & ಕಾಂಪೌಂಡ್ ನಿರ್ಮಾಣಕ್ಕೆ 25.00 ಲಕ್ಷ) | 100.00 | |
| 7 | ಯಾದಗಿರಿ ನಗರದ ಸೌಂದರ್ಯ ಅಭಿವೃದ್ಧಿಗೆ ಆಧುನಿಕ ಬಸ್ ಶೆಲ್ಟರ್, ವೆಲ್‌ಕಮ್ ಆರ್ಚ್ ನಾಮಫಲಕಗಳು, ರಸ್ತೆ ಬದಿಯಲ್ಲಿ ಸಸಿ ನೆಡುವುದು. | 100.00 | |

| | | | |
|---|---|---|---|
| 8 | ಯಾದಗಿರಿ ನಗರದಲ್ಲಿ ಲೆಡ್ ಬಲ್ಬ್‌ಗಳನ್ನು ಅಳವಡಿಸುವುದು. | 50.00 | |
| 9 | ಯಾದಗಿರಿ ನಗರದಲ್ಲಿ ಪತ್ರಿಕಾ ಭವನ ನಿರ್ಮಾಣಕ್ಕೆ | 50.00 | |
| 10 | ಯಾದಗಿರಿ ತಾಲ್ಲೂಕಿನ ಚಂದಾಪುರ ಗ್ರಾಮದಲ್ಲಿ ಕುಡಿಯುವ ನೀರು & ಮೂಲಭೂತ ಸೌಕರ್ಯ ಅಭಿವೃದ್ಧಿ | 25.00 | ಎಸ್.ಸಿ.ಪಿ |
| 11 | ಯಾದಗಿರಿ ತಾಲ್ಲೂಕಿನ ನಾಯಕಲ್ ಗ್ರಾಮದಲ್ಲಿ ಕುಡಿಯುವ ನೀರು & ಮೂಲಭೂತ ಸೌಕರ್ಯ ಅಭಿವೃದ್ಧಿ. | 25.00 | |
| 12 | ಯಾದಗಿರಿ ನಗರದಲ್ಲಿ ಗ್ರಂಥಾಲಯ ಕಟ್ಟಡ ನಿರ್ಮಾಣ | 50.00 | |
| 13 | ಯಾದಗಿರಿ ಪಟ್ಟಣದ ಬೀಡಿ ವರ್ಕ್ಸ್ ಕಾಲೋನಿಯಲ್ಲಿ ಮೂಲಭೂತ ಸೌಕರ್ಯ | 25.00 | |
| 14 | ಯಾದಗಿರಿ ತಾಲ್ಲೂಕಿನ ಮುದ್ನಾಳ ಗ್ರಾಮದಲ್ಲಿ ಸಿ.ಸಿ ರಸ್ತೆ & ಮೂಲಭೂತ ಸೌಕರ್ಯ | 25.00 | |
| 15 | ಶಹಾಪುರ ತಾಲ್ಲೂಕಿನ ಮಾಚನೂರು ಗ್ರಾಮದಲ್ಲಿ ಸಮುದಾಯ ಭವನ ನಿರ್ಮಾಣ. | 25.00 | |
| | ಒಟ್ಟು | **3000.00** | |

**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್ 1774

## ಶಿಕ್ಷಣ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಸರ್ಕಾರಿ/ಖಾಸಗಿ ಅನುದಾನಿತ/ಖಾಸಗಿ ಅನುದಾನರಹಿತ ಪಾಲಿಟೆಕ್ನಿಕ್‌ಗಳಲ್ಲಿ ಎಐಸಿಟಿಇಯು ನಿಗದಿಪಡಿಸಿರುವ ಪ್ರತಿ ಕೋರ್ಸಿನಲ್ಲಿ ಒಟ್ಟು ಪ್ರವೇಶಾತಿಯ ಮೇಲೆ ಶೇ.5ರಷ್ಟು ಸಂಖ್ಯಾಧಿಕ ಸೀಟುಗಳನ್ನು ಬೋಧನಾ ಶುಲ್ಕವಿಲ್ಲದೆ ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ಸೀಟು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. 2011–12ನೇ ಸಾಲಿನ ಎಐಸಿಟಿಇ ಪ್ರವೇಶ ಅನುಮೋದನೆಯ ಕಿರು ಪುಸ್ತಕದ ಮಾರ್ಗಸೂಚಿ.

**2.** ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 11 ಎಸಿಎಂ(1) 2011–12 ದಿನಾಂಕ: 27–6–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಮಾರ್ಗಸೂಚಿಯಲ್ಲಿ ಎಐಸಿಟಿಇಯಿಂದ ಮಾನ್ಯತೆ ಪಡೆದ ಎಲ್ಲಾ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ಎಐಸಿಟಿಇಯು ನಿಗದಿಪಡಿಸಿರುವ ಪ್ರತಿ ಕೋರ್ಸಿನಲ್ಲಿ ಒಟ್ಟು ಪ್ರವೇಶಾತಿಯ ಮೇಲೆ ಶೇ.5 ರಷ್ಟು ಸಂಖ್ಯಾಧಿಕ ಸೀಟುಗಳನ್ನು ಬೋಧನಾ ಶುಲ್ಕವಿಲ್ಲದೆ ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ಸೀಟು ಹಂಚಿಕೆ ಮಾಡಲು ಕೆಲವು ಷರತ್ತುಗಳ ಮೇರೆಗೆ ಹಂಚಿಕೆ ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ಪಾಲಿಟೆಕ್ನಿಕ್‌ಗಳಿಗೆ ಸಂಬಂಧಿಸಿದಂತೆ ಖಾಸಗಿ ಅನುದಾನರಹಿತ ಪಾಲಿಟೆಕ್ನಿಕ್‌ಗಳ ಸೀಟುಗಳು ಪೂರ್ಣ ಪ್ರಮಾಣದಲ್ಲಿ ಆಡಳಿತ ಮಂಡಳಿ ಕೋಟಾ ಸೀಟುಗಳೇ ಆಗಿರುವುದರಿಂದ ಎಐಸಿಟಿಇ ಬೋಧನಾ ಶುಲ್ಕ ಮನ್ನಾ ಯೋಜನೆ (Tuition Fee Waiver Scheme) ಯನ್ನು ಖಾಸಗಿ ಅನುದಾನರಹಿತ ಪಾಲಿಟೆಕ್ನಿಕ್‌ಗಳಿಗೆ ಜಾರಿಗೊಳಿಸುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 155 ಟಿಪಿಇ 2011 ಬೆಂಗಳೂರು, ದಿನಾಂಕ: 8ನೇ ಜುಲೈ 2011**

2011–12ನೇ ಸಾಲಿಗೆ ಸರ್ಕಾರಿ/ಖಾಸಗಿ ಅನುದಾನಿತ/ಖಾಸಗಿ ಅನುದಾನರಹಿತ ಪಾಲಿಟೆಕ್ನಿಕ್‌ಗಳಲ್ಲಿ ಎಐಸಿಟಿಇಯಿಂದ ಮಾನ್ಯತೆ ಪಡೆದ ಎಲ್ಲಾ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ಎಐಸಿಟಿಇಯು ನಿಗದಿಪಡಿಸಿರುವ ಪ್ರತಿ ಕೋರ್ಸಿನಲ್ಲಿ ಒಟ್ಟು ಪ್ರವೇಶಾತಿಯ ಮೇಲೆ ಶೇ. 5 ರಷ್ಟು ಸಂಖ್ಯಾಧಿಕ ಸೀಟುಗಳನ್ನು ಬೋಧನಾ ಶುಲ್ಕ ಮನ್ನಾ ಯೋಜನೆ (Tuition Fee Waiver Scheme) ಯನ್ನು ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳಿಗೆ ಸೀಟು ಹಂಚಿಕೆಯನ್ನು ಈ ಕೆಳಕಂಡ ನಿಬಂಧನೆಗೊಳಪಡಿಸಿ ಹಂಚಿಕೆ ಮಾಡಲು ಆದೇಶಿಸಿದೆ.

**ನಿಬಂಧನೆಗಳು:**

1. ಎಲ್ಲಾ ಸರ್ಕಾರಿ/ಖಾಸಗಿ ಅನುದಾನಿತ/ಖಾಸಗಿ ಅನುದಾನರಹಿತ (ಅಲ್ಪಸಂಖ್ಯಾತ ಹಾಗೂ ಅಲ್ಪಸಂಖ್ಯಾತವಲ್ಲದ) ಪಾಲಿಟೆಕ್ನಿಕ್‌ಗಳಲ್ಲಿ ಎಐಸಿಟಿಇಯು ನಿಗದಿಪಡಿಸಬಹುದಾದ ಪ್ರತಿ ಕೋರ್ಸುಗಳ ಒಟ್ಟು ಪ್ರವೇಶ ಮಿತಿಯ ಮೇಲೆ ಶೇ. 5ರಷ್ಟು ಸಂಖ್ಯಾಧಿಕ ಸೀಟುಗಳನ್ನು (supernumerary seats) ಬೋಧನಾ ಶುಲ್ಕವಿಲ್ಲದೆ (without fees) ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ. 2.50 ಲಕ್ಷದ ಮಿತಿಯೊಳಗಿರುವ ಫಲಾನುಭವಿಗಳಿಗೆ ಸೀಟನ್ನು ಹಂಚಿಕೆ ಮಾಡಲಾಗುವುದು. ಕುಟುಂಬದ ವಾರ್ಷಿಕ ಆದಾಯ ದೃಢೀಕರಣ ಪತ್ರವನ್ನು ಆಯಾ ತಾಲ್ಲೂಕು ತಹಶೀಲ್ದಾರರಿಂದ ಪಡೆದು ಹಾಜರುಪಡಿಸತಕ್ಕದ್ದು.

(ಅ) ರಾಜ್ಯ ಸರ್ಕಾರವು ನಿಗದಿಪಡಿಸಿರುವ ಬೋಧನಾ ಶುಲ್ಕವನ್ನು ಈ ಫಲಾನುಭವಿಯು ಭರಿಸತಕ್ಕದ್ದಲ್ಲ.

(ಆ) ಎಐಸಿಟಿಇಯ ಈ ಯೋಜನೆಯು ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿನ ಪ್ರತಿ ಕೋರ್ಸುಗಳಲ್ಲೂ ಶೇ. 5ರಷ್ಟನ್ನು ಸಂಖ್ಯಾಧಿಕವಾಗಿ ಹಂಚಿಕೆಯನ್ನು ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದಡಿ ನಡೆಯುವ ಕೇಂದ್ರೀಕೃತ ಪ್ರವೇಶ ಘಟಕಗಳ ಮೂಲಕ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇರೆಗೆ ಅರ್ಹರಾದವರಿಂದ ಮಾತ್ರ ಭರ್ತಿ ಮಾಡತಕ್ಕದ್ದು.

(ಇ) ಈ ಸೀಟುಗಳನ್ನು ಅರ್ಹ ಅಭ್ಯರ್ಥಿಗಳಿಗೆ ಅವರು ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇರೆಗೆ ಹಂಚಿಕೆ ಮಾಡಲು ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದ ನೋಡಲ್ ಸೆಂಟರ್ ಅಧಿಕಾರಿಗಳಿಗೆ ಅಧಿಕಾರವನ್ನು ನೀಡಲಾಗಿದೆ.

(ಈ) ಸಂಖ್ಯಾಧಿಕ ಸೀಟುಗಳಿಗೆ (supernumerary seats) ವಿದ್ಯಾರ್ಥಿಗಳ ಲಭ್ಯತೆ ಇಲ್ಲದಿದ್ದಲ್ಲಿ ಅದನ್ನು ಸರ್ಕಾರಿ ಅಥವಾ ಆಡಳಿತ ಮಂಡಳಿ ಕೋಟಾ ಸೀಟುಗಳಾಗಿ ಪರಿವರ್ತಿಸತಕ್ಕದ್ದಲ್ಲ.

(ಉ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಪಟ್ಟಿಯನ್ನು ಸಂಬಂಧಪಟ್ಟ ಶಿಕ್ಷಣ ಸಂಸ್ಥೆಗಳಿಗೆ ಮತ್ತು ತಾಂತ್ರಿಕ ಶಿಕ್ಷಣ ನಿರ್ದೇಶಕರಿಗೆ ವಿವರಗಳನ್ನು ನೋಡಲ್ ಸೆಂಟರ್ ಅಧಿಕಾರಿಗಳು ನೀಡತಕ್ಕದ್ದು.

(ಊ) ಈ ವರ್ಗದಡಿ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳು ಯಾವುದೇ ಕಾರಣದಿಂದ ಶಿಕ್ಷಣ ಸಂಸ್ಥೆಗಳು/ಕೋರ್ಸುಗಳ ಬದಲಾವಣೆಗೆ ಅವಕಾಶ ಇರತಕ್ಕದ್ದಲ್ಲ.

(ಋ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಮಾಹಿತಿಯನ್ನು ಶಿಕ್ಷಣ ಸಂಸ್ಥೆಗಳ ಅಂತರಜಾಲದಲ್ಲಿ ಪ್ರಕಟಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಪಿ.ಆರ್. 1775

## LAW, JUSTICE AND HUMAN RIGHTS SECRETARIAT

**Sub :** Writ Petition No: 35644/2010 on the file of the High Court of Karnataka – Establishment of Children's Courts in Karnataka for trying the offences committed against the children under the provisions of the Commission for Protection of Child Rights Act, 2005 – orders – regarding-

**Read:** 1. File No. WCD 242 MA BA BA 2010 (Part-1).

2. Govt. Letter No. LAW 114 LCE 2011 dated 06-07-2011.
3. Letter No. GOB (I) 175/2006 dated 06-07-2011 from the Registrar General, High Court of Karnataka, Bangalore.
4) Letter No. GOB.II.148/2011 dated 08-07-2011 from the Registrar General, High Court of Karnataka, Bangalore.

**Preamble:**

Writ Petition No. 35644/2010 is a Public Interest Litigation filed by Ms. Maya C.P., before the Hon'ble High Court of Karnataka. The petitioner in the said Writ Petition has prayed for the issuance of a direction to the respondent – State of Karnataka to set up Special Courts called Children's Court, as per Section 25 and 26 of the Commission for Protection of Child Rights Act (No. 4 of 2006), 2005, for providing speedy justice for the offences committed against children and in respect of violation of child rights.

It is considered necessary to establish the Children's Court as required under the provisions of the Commission for Protection of Child Rights Act, 2005 for trying the offences committed against the children and for matters connected therewith in the territorial jurisdiction of Bangalore City and also to specify a Court of Sessions in each district of Karnataka to be a Children's Court to try the said offences as required under the provisions of the said Act.

The Registrar General, High Court of Karnataka, has intimated that the Hon'ble Chief Justice is pleased to concur to specify the District and Sessions Court as "Children's Courts" under the Commission for Protection of Child Rights Act, 2005 (Act No. 4 of 2006) – vide letter dated 06-07-2011 read at (3) above, Further the Registrar General has intimated that Hon'ble Chief Justice after considering all relevant materials is pleased to concur with the proposal regarding establishment of Special Court at Bangalore and to create one more post in the cadre of District Judge for presiding over the said Court – vide his letter dated 08-07-2011 read at (4) above. Pending examination of the detailed proposals regarding sanctioning of various categories of posts and other infrastructure facilities as proposed by the Registrar General in his letter dated 08-07-2011, the Women and Child Development Department has requested for the issuance of necessary orders in this regard, as it is agreed in-principle to the establishment of Children's Courts in the State of Karnataka for trying the offences committed against children and/or violation of child rights – vide its file No. WCD 242 MA BA BA 2010 (Part-1) read at (1) above.

Hence the following order.

**Order No. Law 114 LCE 2011, Bangalore, Dated: 11th July 2011**

1. In exercise of the powers conferred under Sections 25 and 26 of the Commission for Protection of Child Rights Act, 2005 and with the concurrence of the Chief Justice of High Court of Karnataka, Government of Karnataka hereby sanction the establishment of a Children's Court at Bangalore and further specify the Courts as mentioned below in the Districts of Karnataka to be the Children's Court in their respective Districts under the provisions of the Commission for Protection of Child Rights Act, 2005 for trying offences against children and/or violation of child rights:

01. The Prl. District and Sessions Judge, Bangalore Rural District, Bangalore.
02. The District and Sessions Judge, Bagalkot.
03. The Prl. District and Sessions Judge, Belgaum.
04. The Prl. District and Sessions Judge, Bellary.
05. The Prl. District and Sessions Judge, Bidar.
06. The Prl. District and Sessions Judge, Bijapur.

07. The District and Sessions Judge, Chamarajanagar.
08. The District and Sessions Judge, Chikkaballapur.
09. The Prl. District and Sessions Judge, Chikmagalur.
10. The Prl. District and Sessions Judge, Chitradurga.
11. The Prl. District and Sessions Judge, Davanagere.
12. The Prl. District and Sessions Judge, Dharwad.
13. The District and Sessions Judge, Gadag.
14. The Prl. District and Sessions Judge, Gulbarga.
15. The Prl. District and Sessions Judge, Hassan.
16. The District and Sessions Judge, Haveri.
17. The Prl. District and Sessions Judge, D.K., Mangalore.
18. The District and Sessions Judge, U.K., Karwar.
19. The District and Sessions Judge, Kodagu-Madikeri.
20. The Prl. District and Sessions Judge, Kolar.
21. The District and Sessions Judge, Koppal.
22. The Prl. District and Sessions Judge, Mandya.
23. The Prl. District and Sessions Judge, Mysore.
24. The District and Sessions Judge, Ramanagara.
25. The Prl. District and Sessions Judge, Raichur.
26. The Prl. District and Sessions Judge, Shimoga.
27. The Prl. District and Sessions Judge, Tumkur.
28. The District and Sessions Judge, Udupi.
29. The District and Sessions Judge, Yadgir.

2. The Department of Women and Child Development, being the concerned Administrative Department, shall examine the proposals of the High Court of Karnataka as detailed in letter dated 08-07-2011, read at (4), relating to recurring and non-recurring expenditure towards the establishment of Special Court at Bangalore, in consultation with the Finance Department, for its incorporation in the budget.

3. This issues with the concurrence of the Finance Department vide its Note No. FD 522 Exp.3/2011 dated 5th July 2011.

By Order and in the name of the Governor of Karnataka

**Syed Abdul Nazeer**

Under Secretary to Government (Admn-I)

Law, Justice and Human Rights Department

P.R. 1776

## ANIMAL HUSBANDRY AND FISHERIES SECRETARIAT

## CIRCULAR

**No. AHF 40 AHP 2011, Bangalore, Dated 08-07-2011**

**Sub :** Strict Enforcement of Karnataka Prevention of Animal Sacrifices Act, 1959 and the Rules, 1963 – reg.

It has come to the notice of Government through various media like T.V. and Newspapers that in the name of religion during festivals like Bakrid, Sankranthi, Vijayadashami and other festivals and Jathras in front of religious places like the Temples, Dargas, Mosques and other places, animals are sacrificed in public places in various District and Taluk Head Quarters in Karnataka, thereby barbaric and cruelty of animals are taking place in the name of religion etc,.

Government has viewed this matter very seriously and in order to prevent cruelty to animals and sacrificing of animals in the name of religion during festivals and Jathras in front of religious places in the State, Government hereby direct to all the Deputy Commissioners and Superintendents of Police who are incharge of their districts to strictly enforce the provisions of the Karnataka Prevention of Animal Sacrifices Act. 1959 and the Rules 1963 and thereby take effective and adequate steps to prevent such violation and also take stern action against the offenders in accordance with law by deputing officers concerned and make adequate Police Bandubasth during festivals and Jathras to prevent animal sacrifices.

**Shivaraam**

Principal Secretary to Government

Animal Husbandry and Fisheries Department.

P.R. 1777

## PLANNING, PROGRAMME MONITORING AND STATISTICS SECRETARIAT

**Sub :** Sanction of New Plan Scheme Viz Karnataka Evaluation Policy and Karnataka Evaluation Authority-Regarding

**Read :**
1) G.O. No. IFS 42 EVF (1) 1999, Bangalore dated 17th Nov 2000
2) Circular No. PD 41 EVF(1) 2003, Bangalore dated 5th June 2003
3) D.O. Ltr No. M-13048/12(KT)2010-SP (South)/DCH/11CD 83 receipt from Montek Singh Ahluwalia, Deputy Chairman, Planning Commission GOI.
4) Proceedings of the meeting held on 03.12.2010 under the Chairmanship of Chief Secretary to Government, GOK – regarding Karnataka Evaluation Policy.

**Preamble:**

Karnataka Government was one of the first in the Nation to evolve a policy on evaluation as early as the year 2000. In the Government Order read at I above, the State Government had issued Evaluation Policy which indicated that all the schemes with a budget outlay of more than Rs. One crore should be evaluated by an external agency at least once during the plan period. Upto 1% of the project (scheme) cost with an upper ceiling of Rs. 5.00 lakhs was earmarked for evaluation. Further, it was stipulated that if any scheme/programme had to be taken forward beyond a plan period, it should have justified itself through an evaluation. The policy also envisaged that the outcomes of the evaluation should have been used for improving programme design and delivery.

2. However, it was soon discovered that to carry out an evaluation of every programme by the Government was not an easy task as there had been far too many programmes with an outlay of Rs. One Crore or more even within each department or wing of the Government. Consequently a change was introduced in the Evaluation Policy in the Circular read at 2 above whereby it was envisaged that each line department would select at least one key plan or non-plan scheme or programme every year for evaluation through an independent agency.

3. The responsibility of evaluation policy implementation was vested with two committees: the respective Departmental co-ordination Committee; and the State Evaluation Coordination Committee chaired by the Additional Chief Secretary. A recent review of the experience of implementing the Evaluation Policy and a workshop conducted by the Planning Department to recognize the challenges ahead revealed that there were quite a few shortcomings in the implementation. They are as follows:

(i) Absence of well formulated programmes with clear verifiable outcomes and measured baseline or benchmarks against which evaluation could have been objectively carried out.

(ii) Imperfection in the supporting institutional structure created in the Planning department and staffing it with personnel without adequate specialized technical competencies as well as the absence of an enabling environment to handle capacity building, advisory service, supervision, coordination and handholding for effective evaluation.

(iii) Uninspiring quality of evaluation reports due to both capacities of the various external agencies taking up evaluation as well as capacity and inclination of various Government departments to effectively monitor and facilitate meaningful evaluation.

(iv) Absence of accountability mechanism, lack of involvement by stakeholders and predominance of official presence in the evaluation process, reducing rigor of evaluation and prevent the creation of an independent stakeholders pressure.

(v) Evaluation process had inherent conflict of interest as the departments being evaluated were the paymaster of the outsourced evaluation agency. The arrangement between Government and evaluator tended to be that of Principal and Agent without independence

(vi) Absence of well thought out control mechanism both for the programme implementation and for programme evaluation, nor was there a procedure for proper dissemination of the findings. The result was that both transparency and quality of the evaluation reports suffered.

(vii) The Policy has not infused any incentives/penalties for the line departments for not seeking evaluation inputs on an ongoing basis and in a transparent manner. Nor had there been a properly established mechanism for incorporating the feedback from evaluation addressing the policy-makers, operational staff and other stakeholders.

(viii) Capacity limitations of the human resources and financial caps (e.g. 1 per cent of the programme outlay) to assess the evaluation designs submitted by the research agencies, imperfect vendor selection and out sourcing evaluation leading to improper (if not sub-standard) evaluation studies. In turn, such evaluations lead also many departments to take the evaluation reports in a routine and monotonous manner than using the reports for improving the policy design, better target identification etc.

(ix) Evaluations are undertaken with very little time prior to the preparation of programmes and financial planning each year. Consequently the evaluations fail to inform the departmental policy making during the subsequent years.

(x) Most evaluations have not been meaningfully used for mid-course correction or reformulation for any of the schemes.

4. In the circumstances explained above and in order to supervise, facilitate, build capacity and handhold the departments for effective evaluation and its use for effective planning, monitoring and fine-tuning the policies, programmes and schemes for result oriented and outcome based implementation Planning Department has now proposed to establish Karnataka Evaluation Authority in the State. This proposal was considered in a meeting taken by Chief Secretary on December 3rd, 2010, and a decision was taken that Planning Department to move a detailed proposal in this regard, vide proceedings read at (4) above.

ಸರ್ಕಾರದ ಆದೇಶದಲ್ಲಿ ರೂ.38,73,159–00ಗಳನ್ನು ಬಿಡುಗಡೆ ಮಾಡಲಾಗಿದೆ. ಪಾವತಿಸಲು ಅನುಮೋದನೆ ನೀಡಲಾಗಿದೆ. ಆದರೆ, ಭೂಮಾಲೀಕರು ಬಾಕಿ ಮೊತ್ತ ಬಿಡುಗಡೆಗೆ 2006 ರಿಂದ 2008ರವೆಗೆ ವಿಳಂಬವಾಗಿರುವುದನ್ನು ಆಕ್ಷೇಪಿಸಿದ್ದರಿಂದ, ದಿನಾಂಕ 1–2–2006 ರಿಂದ 22–7–2008ರವರೆಗಿನ ಅವಧಿಗೆ ಬಡ್ಡಿ ಲೆಕ್ಕ ಹಾಕಿ ರೂ.9,45,315–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪಾವತಿಸಬೇಕಾದ ಬಾಕಿ ಮೊತ್ತದ ಪ್ರಕರಣವಾರು ವಿವರ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ<br>ಎ–ಗುಂ | ಪಾವತಿಸಬೇಕಾದ ಬಾಕಿ ಪರಿಹಾರ<br>ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 337/98 | 85/3 | 0-23 w<br>0-37 d | 15174 |
| 2 | 338/98 | 85/2 | 5-13 d<br>1-10 w | 59582 |
| 3 | 339/98 | 85/1 | 1-14 d<br>0-23 w | 18584 |
| 4 | 340/98 | 84/3 | 5-30 d | 46143 |
| 5 | 341/98 | 84/2 | 4-02 d | 32501 |
| 6 | 342/98 | 84/1 | 5-16 d | 43334 |
| 7 | 343/98 | 83/4 | 1-25 d | 13040 |
| 8 | 344/98 | 83/2 | 1-22 d | 12438 |
| 9 | 345/98 | 83/1 | 1-38d | 15648 |
| 10 | 346/98 | 82/3 | 7-10 d | 58180 |
| 11 | 347/98 | 82/2 | 2-04 d | 16852 |
| 12 | 348/98 | 71/3 | 0-15 | 3009 |
| 13 | 349/98 | 68/5 | 2-32 d | 22469 |
| 14 | 350/98 | 68/4 | 2-04 d | 16852 |
| 15 | 351/98 | 68/3 | 0-32 d | 6419 |
| 16 | 352/98 | 68/2 | 6-22 d | 52563 |
| 17 | 353/98 | 68/1 | 6-27d | 53566 |
| 18 | 354/98 | 67/1-2,67/3,<br>67/1-4 | 12-00 d | 96299 |
| 19 | 355/98 | 67/1 | 1-16 d | 11234 |
| 20 | 356/98 | 65/6 | 0-11 | 2206 |
| 21 | 357/98 | 65/5 | 0-07 | 1478 |
| 22 | 358/98 | 64/3 | 1-00 d | 8024 |
| 23 | 359/98 | 38/2 | 1-08 d | 9630 |
| 24 | 360/98 | 37/2 | 4-00 d | 32099 |
| 25 | 361/98 | 85/13 | 0-17 d<br>0-23 w | 11361 |
| 26 | 362/98 | 82/1 | 2-14 d | 18858 |
| 27 | 363/98 | 83/3 | 1-24 d | 12839 |
| 28 | 364/98 | 90/2 | 2-00 d | 16049 |
| 29 | 365/98 | 86/2 | 3-04 d | 24877 |
| 30 | 366/98 | 85/12 | 1-01 d<br>0-23 w | 16377 |
| 31 | 367/98 | 89/2 | 15-25 d | 125389 |
| 32 | 368/98 | 87/3 | 0-16 | 3209 |
| 33 | 369/98 | 85/10 | 0-04 d<br>0-23w | 8753 |

| | | | | |
|---|---|---|---|---|
| 34 | 370/98 | 85/9 | 0-04 d<br>0-23 w | 8753 |
| 35 | 371/98 | 85/8 | 0-24 d | 4815 |
| 36 | 372/98 | 85/6 | 1-02 d<br>0-23 w | 16563 |
| 37 | 373/98 | 85/7 | 0-36 d<br>0-23 w | 15174 |
| 38 | 374/98 | 85/11 | 0-17 d<br>0-23 w | 11361 |
| 39 | 375/98 | 85/5 | 0-18 d | 3611 |
| ಒಟ್ಟು | | | | **945313** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ:12ನೇ ಜುಲೈ 2011.**

ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ತಾಲ್ಲೂಕು ಮೇಳಕುಂದಾ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮೇಳಕುಂದಾ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಬಾಕಿ ಪರಿಹಾರ ಧನ ಮೊತ್ತ ರೂ.9,45,313–00ಗಳನ್ನು (ಒಂಭತ್ತು ಲಕ್ಷದ ನಲವತ್ತೈದು ಸಾವಿರದ ಮುನ್ನೂರ ಹದಿಮೂರು ರೂಪಾಯಿಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2 ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.

3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಲ್ಲಿ ರೂ.9,45,313/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್.1790

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಗುಂಡಳ್ಳಿ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2011–12/3474, ದಿನಾಂಕ 29–06–2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (16), ದಿನಾಂಕ 09–7–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಗುಂಡಳ್ಳಿ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18–04–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 15–04–2011 |
| ಕರ್ನಾಟಕ ರಾಜ್ಯಪತ್ರ | 14–04–2011 |
| ಪ್ರಜಾವಾಣಿ ದಿನಪತ್ರಿಕೆ | 21–04–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಐದು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಈ ಪೈಕಿ ನಾಲ್ಕು ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 31–05–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,84,86,873/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,70,89,501/– |
| 1 | ಹುಲಿಕಂಠರಾಯ ಸಾಹೇಬ ಗೌಡ ಒಂದನೇ ದರ್ಜೆ ಗುತ್ತಿಗೆದಾರರು | 2,57,33,165/– | 9.67 ಕಡಿಮೆ | 5.006 ಕಡಿಮೆ |
| 2 | ಅಮೃತಾ ಕನ್‌ಸ್ಟ್ರಕ್ಷನ್ಸ್ ಒಂದನೇ ದರ್ಜೆ ಗುತ್ತಿಗೆದಾರರು | 2,67,86,827/– | 5.97 ಕಡಿಮೆ | 1.12 ಕಡಿಮೆ |
| 3 | ಜಿ. ಮಸ್ತಾನಯ್ಯ ಒಂದನೇ ದರ್ಜೆ ಗುತ್ತಿಗೆದಾರರು | 2,67,92,322/– | 5.95 ಕಡಿಮೆ | 1.10 ಕಡಿಮೆ |
| 4 | ದೇವೀಂದ್ರಪ್ಪ ಗೌಡ ಒಂದನೇ ದರ್ಜೆ ಗುತ್ತಿಗೆದಾರರು | 2,72,07,455/– | 4.49 ಕಡಿಮೆ | 0.435 ಹೆಚ್ಚು |

ಮೇಲ್ಕಂಡಂತೆ ಶ್ರೀ ಹುಲಿಕಂಠರಾಯ ಸಾಹೇಬ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.006 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,70,89,501/– ಗಳ ಮೇಲೆ ಶೇಕಡ 5.006 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ.2,57,33,165/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 56 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಗುಂಡಳ್ಳಿ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,70,89,501/– ಗಳ ಮೇಲೆ ಶೇಕಡ 5.006 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 2,57,33,165/–ಗಳಿಗೆ (ರೂ. ಎರಡು ಕೋಟಿ ಐವತ್ತೇಳು ಲಕ್ಷ ಮೂವತ್ತಮೂರು ಸಾವಿರದ ಒಂದು ನೂರ ಅರವತ್ತೈದು ಮಾತ್ರ) ಶ್ರೀ ಹುಲಿಕಂಠರಾಯ ಸಾಹೇಬ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1791

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಮಲಕೂಡ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-4/2011-12/3370, ದಿನಾಂಕ 24-06-2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (1), ದಿನಾಂಕ 16-7-2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಮಲಕೂಡ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಈ ಕಾಮಗಾರಿಯ ರೂ. 335.00 ಲಕ್ಷ ಅಂದಾಜು ಪಟ್ಟಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18-04-2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 15-04-2011 |
| ಕರ್ನಾಟಕ ರಾಜ್ಯಪತ್ರ | 14-04-2011 |
| ಪ್ರಜಾವಾಣಿ ದಿನಪತ್ರಿಕೆ | 21-04-2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಏಳು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಐದು ಜನ ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 27-05-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,12,29,122/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,95,42,377/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಎಸ್.ಎಂ. ಬೀರಾದಾರ ಒಂದನೇ ದರ್ಜೆ ಗುತ್ತಿಗೆದಾರರು | 2,83,86,137/- | 9.103 ಕಡಿಮೆ | 3.914 ಕಡಿಮೆ |
| 2 | ದೇವೀಂದ್ರಪ್ಪ ಗೌಡ ಎಂ. ಬೀರಾದಾರ ಒಂದನೇ ದರ್ಜೆ ಗುತ್ತಿಗೆದಾರರು | 2,88,30,666/- | 7.680 ಕಡಿಮೆ | 2.41 ಕಡಿಮೆ |
| 3 | ಜಿ. ಮಸ್ತಾನಯ್ಯ ಒಂದನೇ ದರ್ಜೆ ಗುತ್ತಿಗೆದಾರರು | 2,93,70,155/- | 5.952 ಕಡಿಮೆ | 0.58 ಕಡಿಮೆ |
| 4 | ಅಮೃತಾ ಕನ್‌ಸ್ಟ್ರಕ್ಷನ್ಸ್ ಒಂದನೇ ದರ್ಜೆ ಗುತ್ತಿಗೆದಾರರು | 3,00,01,235/- | 3.931 ಕಡಿಮೆ | 1.55 ಹೆಚ್ಚು |
| 5 | ಧನರಾಜ ಎಸ್. ತಾಳಮಪಳ್ಳಿ ಒಂದನೇ ದರ್ಜೆ ಗುತ್ತಿಗೆದಾರರು | 3,43,44,791/- | 9.97 ಹೆಚ್ಚು | 16.25 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಎಂ. ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 3.914 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,95,42,377/- ಗಳ ಮೇಲೆ ಶೇಕಡ 3.914 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 2,83,86,137/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 50 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಮಲಕೂಡ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,95,42,377/- ಗಳ ಮೇಲೆ 3.914 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 2,83,86,137/-ಗಳಿಗೆ (ರೂ. ಎರಡು ಕೋಟಿ ಎಂಬತ್ತಮೂರು ಲಕ್ಷ ಎಂಬತ್ತಾರು ಸಾವಿರದ ಒಂದು ನೂರ ಮುವತ್ತೇಳು ಮಾತ್ರ) ಶ್ರೀ ಎಸ್.ಎಂ. ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 1792

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಭೂತಪೂರ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-14/2011-12/3476, ದಿನಾಂಕ 29-06-2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (1), ದಿನಾಂಕ 03-4-2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಭೂತಪೂರ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18-04-2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 15-04-2011 |
| ಕರ್ನಾಟಕ ರಾಜ್ಯಪತ್ರ | 14-04-2011 |
| ಪ್ರಜಾವಾಣಿ ದಿನಪತ್ರಿಕೆ | 21-04-2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಈ ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 31-05-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,84,61,892/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,42,15,380/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಅಮರೇಶ ಗೌಡ ಬಿ. ಪಾಟೀಲ ಒಂದನೇ ದರ್ಜೆ ಗುತ್ತಿಗೆದಾರರು | 3,31,28,452/- | 16.40 ಹೆಚ್ಚು | 3.177 ಕಡಿಮೆ |

| | | | | |
|---|---|---|---|---|
| 2 | ದೇವೀಂದ್ರಪ್ಪ ಗೌಡ ಎಂ. ಬೀರಾದಾರ<br>ಒಂದನೇ ದರ್ಜೆ ಗುತ್ತಿಗೆದಾರರು | 3,47,78,332/– | 22.19<br>ಹೆಚ್ಚು | 1.64<br>ಹೆಚ್ಚು |
| 3 | ಅಮೃತಾ ಕನ್‌ಸ್ಟ್ರಕ್ಷನ್ಸ್<br>ಒಂದನೇ ದರ್ಜೆ ಗುತ್ತಿಗೆದಾರರು | 3,54,44,905/– | 24.53<br>ಹೆಚ್ಚು | 3.59<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಅಮರೇಶ ಗೌಡ ಬಿ. ಪಾಟೀಲ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 3.177 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,42,15,380/– ಗಳ ಮೇಲೆ ಶೇಕಡ 3.177 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 3,31,28,452/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 55 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಭೂತಪೂರ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 3,42,15,380/– ಗಳ ಮೇಲೆ ಶೇಕಡ 3.177 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 3,31,28,452/–ಗಳಿಗೆ (ರೂ. ಮೂರು ಕೋಟಿ ಮುವತ್ತೊಂದು ಲಕ್ಷ ಇಪ್ಪತ್ತೆಂಟು ಸಾವಿರದ ನಾಲ್ಕು ನೂರ ಐವತ್ತೆರಡು ಮಾತ್ರ) ಶ್ರೀ ಅಮರೇಶ ಗೌಡ ಬಿ. ಪಾಟೀಲ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1793

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ರಂಜೋಳ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2011–12/3475, ದಿನಾಂಕ 29–06–2011.
2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (15), ದಿನಾಂಕ 09–07–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ರಂಜೋಳ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18–04–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 15–04–2011 |
| ಕರ್ನಾಟಕ ರಾಜ್ಯಪತ್ರ | 14–04–2011 |
| ಪ್ರಜಾವಾಣಿ ದಿನಪತ್ರಿಕೆ | 21–04–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ಕು ಜನ ಗುತ್ತಿಗೆದಾರರು ಭಾಗವಹಿಸಿದ್ದು, ನಾಲ್ಕೂ ಜನ ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 31-05-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,34,57,075/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,15,81,085/- |
| 1 | ಎಸ್.ಎಂ. ಬೀರಾದಾರ ಒಂದನೇ ದರ್ಜೆ ಗುತ್ತಿಗೆದಾರರು | 2,96,25,415/- | 11.45 ಕಡಿಮೆ | 6.19 ಕಡಿಮೆ |
| 2 | ದೇವೀಂದ್ರಪ್ಪ ಗೌಡ ಎಂ. ಬೀರಾದಾರ ಒಂದನೇ ದರ್ಜೆ ಗುತ್ತಿಗೆದಾರರು | 3,06,47,466/- | 8.40 ಕಡಿಮೆ | 2.96 ಕಡಿಮೆ |
| 3 | ಅಮೃತಾ ಕನ್‌ಸ್ಟ್ರಕ್ಷನ್ಸ್ ಒಂದನೇ ದರ್ಜೆ ಗುತ್ತಿಗೆದಾರರು | 3,14,61,979/- | 5.96 ಕಡಿಮೆ | 0.38 ಕಡಿಮೆ |
| 4 | ಜಿ. ಮಸ್ತಾನಯ್ಯ ಒಂದನೇ ದರ್ಜೆ ಗುತ್ತಿಗೆದಾರರು | 3,14,65,973/- | 5.95 ಕಡಿಮೆ | 0.36 ಕಡಿಮೆ |

ಮೇಲ್ಕಂಡಂತೆ ಶ್ರೀ ಎಸ್.ಎಂ. ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.19 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,15,81,085/- ಗಳ ಮೇಲೆ ಶೇಕಡ 6.19 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 2,96,25,415/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 57 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ರಂಜೋಳ ಗ್ರಾಮದ ಹತ್ತಿರ ಕಮಲಾವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 3,15,81,085/- ಗಳ ಮೇಲೆ ಶೇಕಡ 6.19 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 2,96,25,415/- ಗಳಿಗೆ (ರೂ. ಎರಡು ಕೋಟಿ ತೊಂಬತ್ತಾರು ಲಕ್ಷ ಇಪ್ಪತ್ತೈದು ಸಾವಿರದ ನಾಲ್ಕು ನೂರ ಹದಿನೈದು ಮಾತ್ರ) ಶ್ರೀ ಎಸ್.ಎಂ. ಬೀರಾದಾರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 1794

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಖೇರಡಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-6/2011-12/2933, ದಿನಾಂಕ 01-06-2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (4), ದಿನಾಂಕ 16-7-2010.

**ಪ್ರಸ್ತಾವನೆ :**

ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಖೇರಡಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 135.00 ಲಕ್ಷದ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ

(ಉತ್ತರ) ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬೀದರ್‌ನಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 13–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಭಾಗವಹಿಸಿದ್ದು, ಅವರು ಅರ್ಹತೆ ಹೊಂದಿರುತ್ತಾರೆ. ಅವರ ಟೆಂಡರ್ ತೆರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,10,26,667/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,42,76,837/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಗುರುನಾಥ ಕೊಳ್ಳೂರ<br>ಒಂದನೇ ದರ್ಜೆ ಗುತ್ತಿಗೆದಾರರು | 1,84,55,588/– | 67.37<br>ಹೆಚ್ಚು | 29.27<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 29.27 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 27–06–2011 ರಂದು ಪತ್ರವನ್ನು ನೀಡಿದ್ದು ಕಾಮಗಾರಿಯನ್ನು ಪರಿಷ್ಕೃತ ಟೆಂಡರಿಗಿಟ್ಟ ದರಗಳ ಮೇಲೆ ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,42,76,837/–ಗಳ ಮೇಲೆ ಶೇಕಡ 8.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,54,18,984/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 48 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಖೇರಡಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,42,76,837/– ಗಳ ಮೇಲೆ ಶೇಕಡ 8.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,54,18,984/– ಗಳಿಗೆ (ರೂ. ಒಂದು ಕೋಟಿ ಐವತ್ತನಾಲ್ಕು ಲಕ್ಷ ಹದಿನೆಂಟು ಸಾವಿರದ ಒಂಭೈನೂರ ಎಂಬತ್ತನಾಲ್ಕು ಮಾತ್ರ) ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 1795

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ಕಲ್ಲಂಬೆಳಗೇರಾ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಉಚ್ಚ ನ್ಯಾಯಾಲಯದ ಆದೇಶಾನುಸಾರ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಸನೀ/(ಉ)ವ/ಭೂಸ್ವಾಪ್ರ/2010–11/4790, ದಿನಾಂಕ 31–08–10.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ಕಲ್ಲಂಬೆಳಗೇರಾ ಗ್ರಾಮದ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳ ಪರಿಹಾರ ಧನದ ವಿಷಯದಲ್ಲಿ ಉಚ್ಚ ನ್ಯಾಯಾಲಯವು ಮೇಲ್ಮನವಿ (ಎಂಎಫ್ಎ) ಪ್ರಕರಣದಲ್ಲಿ ನೀಡಿದ ಆದೇಶದಂತೆ ಪರಿಹಾರ ಪಾವತಿಸಲು ಅನುಮೋದನೆ ನೀಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ದಿನಾಂಕ 31–08–10 ರ ಪತ್ರದಲ್ಲಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚಿತ್ತಾಪುರ ತಾಲ್ಲೂಕಿನ ಕಲ್ಲಂಬೆಳಗೇರಾ ಗ್ರಾಮದ ಬಳಿ ನಿರ್ಮಿಸಿರುವ ಸಣ್ಣ ನೀರಾವರಿ ಕೆರೆಗಾಗಿ ಸದರಿ ಗ್ರಾಮದ ಸ.ನಂ.156/2ರ 9.27 ಎಕರೆ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ 13–02–1997 ರಂದು ಮತ್ತು ಕಲಂ 6(1) ರಡಿ ದಿನಾಂಕ 05–03–1998 ರಂದು ಹೊರಡಿಸಲಾಗಿದೆ. ಪರಿಹಾರಧನದ ಐತೀರ್ಪನ್ನು ವಿಶೇಷ ಭೂಸ್ವಾಧೀನಾಧಿಕಾರಿ, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರು ದಿನಾಂಕ 20–06–1998 ರಂದು ಹೊರಡಿಸಿರುತ್ತಾರೆ.

ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1) ರನ್ವಯ ಸೇಡಂನ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣ ಸಂ : 470/02 ರಲ್ಲಿ ಹೆಚ್ಚಿನ ಪರಿಹಾರ ಧನ ಪಾವತಿಸಲು ತೀರ್ಪು ನೀಡಿದೆ. ಈ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ದಿನಾಂಕ 25–08–2008ರ ತೀರ್ಪಿನಲ್ಲಿ ವಜಾಗೊಂಡಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 177 ಎಲ್ಎಸ್‌ಪಿ 2011, ದಿನಾಂಕ 01–03–2011 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ಮೊತ್ತದ ಶೇ. 50 ರಷ್ಟು ರೂ. 2,27,981/– ಗಳನ್ನು ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ : ಸನೀಇ 66 ಭೂಸ್ವಾಪ್ರ 2005, ದಿನಾಂಕ 16–06–2005 ರಲ್ಲಿ ಅನುಮೋದನೆ ನೀಡಿದೆ. ಉಳಿದ ಮೊತ್ತ ರೂ. 5,20,854/– ಗಳನ್ನು ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್ ರವರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 146 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 12ನೇ ಜುಲೈ 2011**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು ಕಲ್ಲಂಬೆಳಗೇರಾ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲಂಬೆಳಗೇರಾ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ಪಾವತಿಸಲು ರೂ. 4,11,852–00 ಗಳನ್ನು (ನಾಲ್ಕು ಲಕ್ಷದ ಹನ್ನೊಂದು ಸಾವಿರದ ಎಂಟುನೂರ ಐವತ್ತೆರಡು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ **"**ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು**"** ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 4,11,852–00/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1796

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ ಗ್ರಾಮದ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2010–11/1735, ದಿನಾಂಕ 28–03–2011.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ ಗ್ರಾಮದ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋರಗಲ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ 28–03–2011ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರ ಅಧಿಸೂಚನೆಯನ್ನು ದಿನಾಂಕ 03–03–94 ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು ದಿನಾಂಕ 30–06–1997 ರಂದು ರಚಿಸಿದ ಐತೀರ್ಪಿನಲ್ಲಿ ಪ್ರತಿ ಎಕರೆಗೆ ರೂ.17,000/– ಗಳ ಮಾರುಕಟ್ಟೆ ಬೆಲೆ ನಿಗದಿಪಡಿಸಿರುತ್ತಾರೆ. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಹುಕ್ಕೇರಿ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣವನ್ನು ದಾಖಲಿಸಿದ್ದು ನ್ಯಾಯಾಲಯವು ಪ್ರತಿ ಎಕರೆಗೆ ರೂ. 2,00,000/– ಗಳನ್ನು ನಿಗದಿಪಡಿಸಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು ಉಚ್ಚ ನ್ಯಾಯಾಲಯದಲ್ಲಿ ಎಂಎಫ್ಎ ಸಂಖ್ಯೆ 6222/04 ನ್ನು ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ಸಿವಿಲ್ ನ್ಯಾಯಾಲಯದ ಆದೇಶವನ್ನು ಎತ್ತಿ ಹಿಡಿದು ಮೇಲ್ಮನವಿಯನ್ನು ವಜಾಗೊಳಿಸಿದೆ. ಎಂ.ಎಫ್.ಎ. 6222/04ರ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ : ಲಾ 1563 ಎಲ್‌ಬಿಎಸ್ 2007, ದಿನಾಂಕ 05–09–2007 ರಲ್ಲಿ ಅಭಿಪ್ರಾಯ ನೀಡಿದೆ. ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಎಂ.ಎಫ್.ಎ. ಸಂಖ್ಯೆ | ಬೋರಗಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 15/03 | 6222/04 | 292/6+7+8ಎ<br>292/6+7+8ಬಿ<br>292/6+7+8ಸಿ | 3–39 | 20,54,676–00 |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 39 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 13ನೇ ಜುಲೈ 2011**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಬೋರಗಲ್ ಗ್ರಾಮದ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬೋರಗಲ್ ಗ್ರಾಮದ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ. 20,54,676–00 ಗಳನ್ನು (ಇಪ್ಪತ್ತು ಲಕ್ಷದ ಐವತ್ತ್ನಾಲ್ಕು ಸಾವಿರದ ಆರುನೂರ ಎಪ್ಪತ್ತಾರು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 20,54,676–00/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಪಿ.ಆರ್. 1797

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಬೆಲ್ದಾಳ ಗ್ರಾಮದ ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011–12/2766 ದಿನಾಂಕ: 26–05–2011.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(4) ದಿನಾಂಕ: 16–07–2010.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಬೆಲ್ದಾಳ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 70.00 ಲಕ್ಷದ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಸಣ್ಣ ನೀರಾವರಿ ವಿಭಾಗ ಬೀದರ್‌ನಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 08–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 13–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಭಾಗವಹಿಸಿದ್ದು, ಅವರು ಅರ್ಹತೆ ಹೊಂದಿರುತ್ತಾರೆ. ಅವರ ಟೆಂಡರ್ ತೆರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 69,22,261/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 96,08,525/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| ಗುರುನಾಥ ಕೊಳ್ಳೂರ ಒಂದನೇ ದರ್ಜೆ ಗುತ್ತಿಗೆದಾರರು | 1,01,13,535/– | 46.09 ಹೆಚ್ಚು | 5.255 ಹೆಚ್ಚು |

ಮೇಲ್ಕಂಡಂತೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 5.255ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 96,08,525/–ಗಳ ಮೇಲೆ ಶೇ.5.255ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,01,13,535/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 45 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 13–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನ ಬೆಲ್ದಾಳ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 96,08,525/–ಗಳ ಮೇಲೆ ಶೇ. 5.255ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,01,13,535/–ಗಳಿಗೆ (ಒಂದು ಕೋಟಿ ಒಂದು ಲಕ್ಷ ಹದಿಮೂರು ಸಾವಿರದ ಐದು ನೂರ ಮೂವತ್ತೈದು ರೂಪಾಯಿಗಳು ಮಾತ್ರ) ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1) ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2) ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಪಿಆರ್.ನಂ. 1798

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಹಾಗೂ ತಾಲ್ಲೂಕಿನ ಮಹಾಗಾಂವ ವಾಡಿ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2011–12/3478 ದಿನಾಂಕ: 29–06–2011.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(6) ದಿನಾಂಕ: 06–07–2010.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯ ಹಾಗೂ ತಾಲ್ಲೂಕಿನ ಮಹಾಗಾಂವ ವಾಡಿ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಈ ಕಾಮಗಾರಿಯ ರೂ. 470.00 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18–04–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 15–04–2011 |
| ಕರ್ನಾಟಕ ರಾಜ್ಯಪತ್ರ | 14–04–2011 |
| ಪ್ರಜಾವಾಣಿ ದಿನಪತ್ರಿಕೆ | 21–04–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಎಂಟು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಮೂರು ಜನ ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ: 27–05–2011ರಂದು ತೆರೆದು ಪರಿಶೀಲಿಸಲಾಗಿದ್ದು ವಿವರುಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 4,07,51,745/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,93,43,162/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ರವಿಶಂಕರ ಆರ್ ಅಂದ್ರಾಳ<br>ಒಂದನೇ ದರ್ಜೆ<br>ಗುತ್ತಿಗೆದಾರರು | 3,51,65,158/– | 13.71 ಕಡಿಮೆ | 10.619 ಕಡಿಮೆ |
| 2 | ಧನರಾಜ ಎಸ್ ತಾಳಂಪಳ್ಳಿ<br>ಒಂದನೇ ದರ್ಜೆ<br>ಗುತ್ತಿಗೆದಾರರು | 4,48,25,393/– | 10.00 ಹೆಚ್ಚು | 13.93 ಹೆಚ್ಚು |
| 3 | ಜಿ. ಮಸ್ತಾನಯ್ಯ<br>ಒಂದನೇ ದರ್ಜೆ<br>ಗುತ್ತಿಗೆದಾರರು | 3,83,18,133/– | 5.97 ಕಡಿಮೆ | 2.605 ಕಡಿಮೆ |

ಮೇಲ್ಕಂಡಂತೆ ಶ್ರೀ ರವಿಶಂಕರ ಆರ್. ಅಂದ್ರಾಳ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.619 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,93,43,162/– ಗಳ ಮೇಲೆ ಶೇಕಡ 10.619 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 3,51,65,158/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 53 ಅಪಿಬಿಂ 2011, (ತಾಂತ್ರಿಕ) ಬೆಂಗಳೂರು, ದಿನಾಂಕ: 13ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಹಾಗೂ ತಾಲ್ಲೂಕಿನ ಮಹಾಗಾಂವ ವಾಡಿ ಗ್ರಾಮದ ಹತ್ತಿರ ಬೆಣ್ಣೆತೋರಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ

ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 3,93,43,162/-ಗಳ ಮೇಲೆ 10.619 ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 3,51,65,158/-ಗಳಿಗೆ (ರೂ. ಮೂರು ಕೋಟಿ ಐವತ್ತೊಂದು ಲಕ್ಷ ಅರವತ್ತೈದು ಸಾವಿರದ ಒಂದು ನೂರ ಐವತ್ತೆಂಟು ಮಾತ್ರ) ಶ್ರೀ ರವಿಶಂಕರ ಆರ್ ಅಂದ್ರಾಳ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 1799

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಹೆಚ್. ವಿಶ್ವನಾಥ್, ನಿವೃತ್ತ ಪಿಎಸ್.ಐ ರವರಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತ ವಾರ್ತೆ ರವರ ಪತ್ರ ಸಂಖ್ಯೆ: ಎಸ್‌ಬಿಎ/ಸಿಬ್ಬಂದಿ-6/ಪ್ರಭಾರ-161/2006-07 ದಿನಾಂಕ: 02-06-2009.
2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(2)/40/2009-10 ದಿನಾಂಕ: 24-06-2009, 03- 02-2011 ಮತ್ತು 06-06-2011.

**ಪ್ರಸ್ತಾವನೆ:**

ಶ್ರೀ ಎಸ್.ಹೆಚ್. ವಿಶ್ವನಾಥ್, ಪಿ.ಎಸ್.ಐ ರಾಜ್ಯ ಗುಪ್ತ ವಾರ್ತೆ, ಮಧುಗಿರಿ ರವರು ಪೊಲೀಸ್ ಇನ್ಸ್‌ಪೆಕ್ಟರ್, ಗುಪ್ತ ವಾರ್ತೆ, ಮಧುಗಿರಿ ರವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ ಅಧಿಕ ಪ್ರಭಾರ ವಹಿಸಿ, ಹೆಚ್ಚಿನ ಹೊಣೆಗಾರಿಕೆಯಿಂದ ಕರ್ತವ್ಯ ನಿರ್ವಹಿಸಿರುವುದರಿಂದ ದಿನಾಂಕ: 03-02-2006 ರಿಂದ 12-02-2008ರ ವರೆಗೆ ಕೆ.ಸಿ.ಎಸ್.ಆರ್. ನಿಯಮ 68ರ ಅನ್ವಯ ಪ್ರಭಾರ ಭತ್ಯೆಯನ್ನು ಮೇಲೆ ಓದಲಾದ (1)ರ ಪತ್ರದಲ್ಲಿ ಐಜಿಪಿ ರಾಗುವಾ ರವರು ಮಂಜೂರು ಮಾಡಿರುತ್ತಾರೆ. ತದನಂತರ ದಿನಾಂಕ: 02-05-2005 ರಿಂದ 30-06-2005 ರವರೆಗೆ ವೇತನ ಶ್ರೇಣಿ ರೂ. 5575-10620/-ರ ಕನಿಷ್ಠ ವೇತನದ ಶೇ.5 ರಷ್ಟು ಹಾಗೂ ದಿನಾಂಕ: 01-07-2005 ರಿಂದ 18-03-2007 ರವರೆಗೆ ಪರಿಷ್ಕೃತ ವೇತನ ಶ್ರೇಣಿ ರೂ. 10,800-20,025/- ರ ಕನಿಷ್ಠ ವೇತನದ ಶೇ.5 ರಷ್ಟು ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (2)ರ ಡಿಜಿ ಮತ್ತು ಐಜಿಪಿ ರವರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 239 ಪೊಸಇ 2009 ಬೆಂಗಳೂರು, ದಿನಾಂಕ: 15-07-2011**

ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎಸ್.ಹೆಚ್. ವಿಶ್ವನಾಥ್ ನಿವೃತ್ತ ಪಿಎಸ್‌ಐ ಇವರು ರಾಜ್ಯಗುಪ್ತ ವಾರ್ತೆ, ಮಧುಗಿರಿ ಘಟಕದ ಪೊಲೀಸ್ ಇನ್ಸ್‌ಪೆಕ್ಟರ್ ಹುದ್ದೆಯಲ್ಲಿ ದಿನಾಂಕ: 02-05-2005 ರಿಂದ 18-03-2007 ರವರೆಗೆ ಹೆಚ್ಚುವರಿ ಕರ್ತವ್ಯ ನಿರ್ವಹಿಸಿದ ಸಂಬಂಧದಲ್ಲಿ ದಿನಾಂಕ: 02-05-2005 ರಿಂದ 30-06-2005 ರವರೆಗೆ ವೇತನ ಶ್ರೇಣಿ ರೂ. 5575-10620ರ ಕನಿಷ್ಠ ಮೂಲ ವೇತನದ ಶೇಕಡ 5 ರಷ್ಟು (ರೂ. 1000/-ಗಳ ಮಿತಿಗೊಳಪಟ್ಟು) ಹಾಗೂ ದಿನಾಂಕ: 01-07-2005 ರಿಂದ 18-03-2007 ರ ವರೆಗೆ ಪರಿಷ್ಕೃತ ವೇತನ ಶ್ರೇಣಿ ರೂ. 10800-20025ರ ಕನಿಷ್ಠ ಮೂಲ ವೇತನದ ಶೇಕಡ 5 ರಷ್ಟು (1000 ರೂ.ಗಳ ಮಿತಿಗೊಳಪಟ್ಟು) ಪ್ರಭಾರ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ 68 ರನ್ವಯ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿಆರ್.ನಂ. 1800

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 ದಿನಾಂಕ: 24-08-2009.
2. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ-2) ದಿನಾಂಕ: 13-01-2011.
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001 ದಿನಾಂಕ: 22-11-2001.
4. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ-2) ದಿನಾಂಕ: 21-05-2011.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸೇನೌವ 2011 ದಿನಾಂಕ: 31-05-2011.
6. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ-2) ದಿನಾಂಕ: 30-06-2011.

**ಪ್ರಸ್ತಾವನೆ:**

ಮೇಲೆ (4) ರಲ್ಲಿ ಓದಲಾದ ದಿನಾಂಕ: 21-05-2011ರ ಸರ್ಕಾರಿ ಆದೇಶದಲ್ಲಿ ಪೊಲೀಸ್ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗ ಸೂಚಿಗಳನ್ನು ನೀಡಲಾಗಿದ್ದು, 2011-12ನೇ ಸಾಲಿನ ಪೊಲೀಸ್ ಸಿಬ್ಬಂದಿಗಳ (ಲಿಪಿಕ ನೌಕರರನ್ನು

ಹೊರತುಪಡಿಸಿ) ಸಾಮಾನ್ಯ ವರ್ಗಾವಣೆಯನ್ನು ಜೂನ್ 15, 2011 ರೊಳಗಾಗಿ ಜಾರಿಗೊಳಿಸತಕ್ಕದ್ದು ಎಂದು ಆದೇಶಿಸಲಾಗಿತ್ತು. ಉಲ್ಲೇಖ(5)ರ ಆದೇಶದಲ್ಲಿ ಸಿಆಸು ಇಲಾಖೆಯು ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ: 30–06–2011ರ ವರೆಗೆ ಮಾಡಬಹುದು ಎಂದು ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆ ಅವಧಿಯನ್ನು ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಸರ್ಕಾರವು ಮೇಲೆ ಓದಲಾದ (6)ರ ಆದೇಶದಲ್ಲಿ ದಿನಾಂಕ: 30–06–2011 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಆಡಳಿತಾತ್ಮಕ ಕಾರಣಗಳಿಂದ ಮತ್ತು ಕಾನೂನು ಸುವ್ಯವಸ್ಥೆ ಕಾಪಾಡುವ ಹಿತದೃಷ್ಟಿಯಿಂದ, ಈ ಅವಧಿಯನ್ನು ವಿಸ್ತರಿಸುವುದು ಅಗತ್ಯವೆಂದು ಮನಗಂಡು ಪೊಲೀಸ್ ಇಲಾಖೆಗೆ ಸಂಬಂಧಪಟ್ಟಂತೆ ಪಿಎಸ್ಐ, ಸಿಪಿಐ ಮತ್ತು ಡಿವೈಎಸ್‌ಪಿ ವೃಂದದ ಅಧಿಕಾರಿಗಳ ವರ್ಗಾವಣೆ ಪ್ರಕ್ರಿಯೆಯನ್ನು ಮಾತ್ರ ಜುಲೈ 31, 2011 ರವರೆಗೆ ವಿಸ್ತರಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾಗ–2) ಬೆಂಗಳೂರು, ದಿನಾಂಕ: 15–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ (4) ರಲ್ಲಿನ ದಿನಾಂಕ: 21–05–2011ರ ಸರ್ಕಾರದ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಪೊಲೀಸ್ ಇನ್ಸ್‌ಪೆಕ್ಟರ್ ಪೊಲೀಸ್ ಉಪಾಧೀಕ್ಷಕರ ವೃಂದದ ವರೆಗಿನ ಅಧಿಕಾರಿಗಳ ವರ್ಗಾವಣೆಗಳನ್ನು ದಿನಾಂಕ: 31–07–2011ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿಆರ್.ನಂ. 1801

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಮೆ: ಟೊಯೋಟಾ ಕಿರ್ಲೋಸ್ಕರ್ ಮೋಟಾರ್ ಲಿ., ಬಿಡದಿ, ರಾಮನಗರ ಜಿಲ್ಲೆ, ಇವರ ಚಿಕ್ಕ ಕಾರು ಘಟಕಕ್ಕೆ dies, patterns, tools and accessories for machinery ಒಳಗೊಂಡು ಯಂತ್ರಸ್ಥಾವರಗಳು ಮತ್ತು ಉಪಕರಣಗಳ ಮೇಲೆ ಪ್ರವೇಶ ತೆರಿಗೆ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1.ಸರ್ಕಾರಿ ಆದೇಶ ಸಂಖ್ಯೆ: ಸಿಐ 432 ಎಸ್‌ಪಿಐ 2005, ದಿನಾಂಕ: 12.06.2009.

**2**. ಮೆ: ಟೊಯೊಟಾ ಕಿರ್ಲೋಸ್ಕರ್ ಮೋಟಾರ್ ಲಿ., ರವರ ಪತ್ರ ಸಂಖ್ಯೆ: TKM/TXN/EFC/C&I/002/10-12, dated: 25.08.2010.

**ಪ್ರಸ್ತಾವನೆ:**

ಮೆ: ಟೊಯೋಟಾ ಕಿರ್ಲೋಸ್ಕರ್ ಮೋಟಾರ್ ಲಿ. (ಟಿಕೆಎಂಎಲ್) ಸಂಸ್ಥೆಯು ರಾಮನಗರ ಜಿಲ್ಲೆಯ ಬಿಡದಿಯಲ್ಲಿ ಪ್ರಯಾಣಿಕರ ವಾಹನಗಳಾದ ಕ್ವಾಲೀಸ್, ಇನ್ನೋವಾ, ಕರೋಲಾ, ಆಲ್ಟೀಸ್ ಮುಂತಾದ ಕಾರುಗಳನ್ನು ಉತ್ಪಾದನೆ ಮಾಡಲು ಒಟ್ಟು ರೂ. 2110.80 ಲಕ್ಷಗಳ ಬಂಡವಾಳ ಹೂಡಿಕೆಯೊಂದಿಗೆ ಹಾಗೂ 2500 ಜನರಿಗೆ ಉದ್ಯೋಗ ನೀಡಿಕೆಯೊಂದಿಗೆ ಘಟಕವನ್ನು ಸ್ಥಾಪಿಸಿರುತ್ತದೆ.

ಸದರಿ ಘಟಕಕ್ಕೆ ಸರ್ಕಾರದ ವತಿಯಿಂದ ಕೈಗಾರಿಕಾ ನೀತಿ 2009–14 ರನ್ವಯ ಲಭ್ಯವಿರುವ ಹಲವಾರು ರಿಯಾಯಿತಿ ಮತ್ತು ಉತ್ತೇಜನಗಳನ್ನು ಮಂಜೂರು ಮಾಡಲಾಗಿದೆ.

ಸದರಿ ಘಟಕವು ವಿಸ್ತರಣಾ ಯೋಜನೆಯಡಿಯಲ್ಲಿ ಚಿಕ್ಕ ಕಾರುಗಳನ್ನು ಉತ್ಪಾದನೆ ಮಾಡಲು 7 ವರ್ಷಗಳಲ್ಲಿ ಅಂದರೆ 2009–16 ರವರೆಗೆ ರೂ. 4,043 ಕೋಟಿಗಳಷ್ಟು ಬಂಡವಾಳ ಹೂಡಿಕೆ ಮಾಡಲಿದೆ. ಇದರಿಂದಾಗಿ 2300 ಜನರಿಗೆ ನೇರ ಮತ್ತು 3000 ಜನರಿಗೆ ಪರೋಕ್ಷವಾಗಿ ಉದ್ಯೋಗ ದೊರಕಲಿದೆ. ಈ ಹಿನ್ನೆಲೆಯಲ್ಲಿ ಮೆ: ಟಿಕೆಎಂಎಲ್ ರವರು ಸರ್ಕಾರಕ್ಕೆ ಮನವಿಯನ್ನು ನೀಡಿ 2009–10 ರಿಂದ 2013–14 ರವರೆಗೆ ಯಂತ್ರಸ್ಥಾವರಗಳು ಮತ್ತು ಉಪಕರಣಗಳ (Plant & Machinery) ಮೇಲೆ ಪ್ರವೇಶ ತೆರಿಗೆ ಹಾಗೂ ಗುತ್ತಿಗೆ ಕೆಲಸಗಳ ತೆರಿಗೆ ವಿನಾಯಿತಿ ಕೋರಿರುತ್ತಾರೆ. ಅದರಂತೆ ಮೆ: ಟಿಕೆಎಂಎಲ್ ಘಟಕದ ವಿಸ್ತರಣಾ ಯೋಜನೆಗೆ 2009–10 ರಿಂದ 2011–12 ರವರೆಗೆ 3 ವರ್ಷಗಳವರೆಗೆ ಕೆಳಕಂಡ ವಿನಾಯಿತಿಯನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ನೀಡಲಾಗಿದೆ.

"Entry Tax exemption on Plant & Machinery and Works Contract Tax for a period of 3 years i.e. for 01.06.2009 to 31.05.2012 for their expansion project.

ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಎಫ್‌ಡಿ 104 ಸಿಎಸ್ಎಲ್ 1997 (7) ದಿನಾಂಕ: 12.06.1998 ರಲ್ಲಿ ನೀಡಿದ ಪ್ರವೇಶ ತೆರಿಗೆ ವಿನಾಯಿತಿಯನ್ನು dies, patterns, tools, accessories for machinery ಒಳಗೊಂಡು ಯಂತ್ರಸ್ಥಾವರಗಳು ಮತ್ತು ಉಪಕರಣಗಳ ಮೇಲೆ ನೀಡಲಾಗಿತ್ತು. ಈಗ ಕೇವಲ ಯಂತ್ರಸ್ಥಾವರಗಳು ಮತ್ತು ಉಪಕರಣಗಳ ಮೇಲೆ ಪ್ರವೇಶ ತೆರಿಗೆ ವಿನಾಯಿತಿಯನ್ನು ನೀಡಲಾಗಿದೆ. ಆದ್ದರಿಂದ dies, patterns, tools, accessories for machinery ಮೇಲೆ ಸಹಿತ ಪ್ರವೇಶ ತೆರಿಗೆ ವಿನಾಯಿತಿ ನೀಡಬೇಕೆಂದು ಮೆ: ಟಿಕೆಎಂಎಲ್ ಅವರು ಮೇಲೆ (2) ರಲ್ಲಿ ಓದಲಾದ ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಮನವಿಯ ಬಗ್ಗೆ ದಿನಾಂಕ: 20.06.2011ರ ಸಚಿವ ಸಂಪುಟ ಸಭೆಯಲ್ಲಿ ವಿಷಯ 284/2011 ಪ್ರಕಾರ ಚರ್ಚಿಸಲಾಗಿದೆ.

ಪ್ರಸ್ತಾವನೆಯನ್ನು ಸರ್ಕಾರವು ಸಮಗ್ರವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 440 ಎಸ್‌ಪಿಐ 2010, ಬೆಂಗಳೂರು, ದಿನಾಂಕ: 12/07/2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ , ಮೆ: ಟೊಯೋಟಾ ಕಿರ್ಲೋಸ್ಕರ್ ಮೋಟಾರ್ ಲಿ., ರವರು ರಾಮನಗರ ಜಿಲ್ಲೆ, ಬಿಡದಿಯಲ್ಲಿ ಸ್ಥಾಪಿಸುತ್ತಿರುವ ರೂ. 4,043 ಕೋಟಿ ಬಂಡವಾಳ ಹೂಡಿಕೆಯ ಚಿಕ್ಕ ಕಾರು ಉತ್ಪಾದನಾ ಘಟಕ ಸ್ಥಾಪನೆಗೆ dies, patterns, tools,

accessories for machinery ಒಳಗೊಂಡು ಯಂತ್ರಸ್ಥಾವರಗಳು ಮತ್ತು ಉಪಕರಣಗಳ ಮೇಲೆ ಪ್ರವೇಶ ತೆರಿಗೆ ವಿನಾಯಿತಿಯನ್ನು ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 197 ಸಿಎಸ್‌ಎಲ್ 2010, ದಿನಾಂಕ: 16.11.2010 ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್ 1802

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ದಿ: ಮೋಹನ್ ಕುಮಾರ್ ಸಾಸನೂರು, ಕೆ.ಎ.ಎಸ್ ಅಧಿಕಾರಿ ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಕೆಇವಿ 08 ದಿನಾಂಕ: 28–10–2008
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಕೆಇವಿ 08 ದಿನಾಂಕ: 01–07–2009
3) ಶ್ರೀಮತಿ ಶಶಿಕಲಾ ಎಂ. ಸಾಸನೂರು ಇವರ ಮನವಿ ದಿ: 06–05–2011

**ಪ್ರಸ್ತಾವನೆ:**

ಶ್ರೀ. ದಿ: ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಇವರು ಈ ಹಿಂದೆ ಉಪ ವಿಭಾಗಾಧಿಕಾರಿಗಳು ಹಾಗೂ ಅಧ್ಯಕ್ಷರು ಭೂ ನ್ಯಾಯ ಮಂಡಳಿ ಧಾರವಾಡ ಇಲ್ಲಿ ಕಾರ್ಯನಿರ್ವಹಿಸಿದ್ದ ಅವಧಿಯಲ್ಲಿ ಇವರು 3992 ಎಕರೆ ಜಮೀನನ್ನು ಕೃಷಿಗೆ ಯೋಗ್ಯವಲ್ಲವೆಂದು ಆದೇಶ ಹೊರಡಿಸಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಹಾಗೂ ದುರ್ನಡತೆಯನ್ನು ಎಸಗಿರುವ ಕಾರಣ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವಂತೆ ಕಂದಾಯ ಇಲಾಖೆಯು ಕೋರಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂ: (1) ರ ಆದೇಶದಲ್ಲಿ ಶಿಸ್ತು ಕ್ರಮ/ ಇಲಾಖಾ ವಿಚಾರಣೆ ಬಾಕಿ ಇಟ್ಟು ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ನಂತರ ಮೇಲೆ ಓದಲಾದ ಕ್ರಮ ಸಂ: (2)ರ ಆದೇಶದಲ್ಲಿ ಶಿಸ್ತು ಕ್ರಮ/ ಇಲಾಖಾ ವಿಚಾರಣೆ ಬಾಕಿ ಇಟ್ಟು ಸದರಿಯವರ ಅಮಾನತ್ತಿನ ಆದೇಶವನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳಲಾಗಿತ್ತು. ಮುಂದುವರೆದು ಶ್ರೀ ಮೋಹನ್‌ಕುಮಾರ್ ಸಾಸನೂರು ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಪ್ರಸ್ತಾವನೆಯನ್ನು ಕಳುಹಿಸುವಂತೆ ಕಂದಾಯ ಇಲಾಖೆಯನ್ನು ಕೋರಲಾಗಿತ್ತು. ಈ ಮಧ್ಯೆ ಶ್ರೀ ಮೋಹನ್‌ಕುಮಾರ್ ಸಾಸನೂರು ಇವರು ಕರ್ತವ್ಯದಲ್ಲಿದ್ದಾಗಲೇ ದಿ: 29–12–2010 ರಂದು ನಿಧನ ಹೊಂದಿರುತ್ತಾರೆ. ಹಾಗೂ ಇವರ ವಿರುದ್ಧ ಇದುವರೆಗೂ ಯಾವುದೇ ಇಲಾಖಾ ವಿಚಾರಣೆ ಪ್ರಾರಂಭವಾಗಿರುವುದಿಲ್ಲ. ಮೇಲೆ ಓದಲಾದ ಕ್ರಮ ಸಂ: (3) ರಲ್ಲಿ ದಿ. ಶ್ರೀ ಮೋಹನ್‌ಕುಮಾರ್ ಸಾಸನೂರು ರವರ ಪತ್ನಿ ಶ್ರೀಮತಿ ಶಶಿಕಲಾ ಎಂ. ಸಾಸನೂರು ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ದಿ. ಮೋಹನ್ ಕುಮಾರ್ ಸಾಸನೂರು ರವರು ಎಸಗಿದ್ದಾರೆನ್ನಲಾದ ದುರ್ನಡತೆಯ ಕುರಿತು ಇದುವರೆವಿಗೂ ಯಾವುದೇ ತೀರ್ಮಾನವಾಗದ ಕಾರಣ ಅವರ ವಿರುದ್ಧ ಹೂಡಲು ಉದ್ದೇಶಿಸಿರುವ ಕ್ರಮಗಳನ್ನು ಕೈ ಬಿಡುವಂತೆ ಹಾಗೂ ಅವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಿ ತಮಗೆ ಪಿಂಚಣಿ ಸೌಲಭ್ಯಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಸದರಿ ಮನವಿಯನ್ನು ಪರಿಶೀಲಿಸಲಾಗಿ ಶ್ರೀ ದಿ: ಮೋಹನ್ ಕುಮಾರ್ ಸಾಸನೂರು ರವರು ದಿ: 29–12–10 ರಂದು ನಿಧನ ಹೊಂದಿದ್ದು ಇವರ ವಿರುದ್ಧ ಈವರೆವಿಗೆ ಯಾವುದೇ ಇಲಾಖಾ ವಿಚಾರಣೆ ಪ್ರಕ್ರಿಯೆಯನ್ನು ಪ್ರಾರಂಭಿಸಿರುವುದಿಲ್ಲ. ಸದರಿ ಅಧಿಕಾರಿಯು ಧಾರವಾಡ ತಾಲ್ಲೂಕಿನ ಭೂ ನ್ಯಾಯಮಂಡಳಿಯ ಅಧ್ಯಕ್ಷರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 3992 ಎಕರೆ ಜಮೀನನ್ನು ಕೃಷಿಗೆ ಯೋಗ್ಯವಲ್ಲವೆಂದು ಹೊರಡಿಸಿದ ಆದೇಶವನ್ನು ಕರ್ನಾಟಕ ಭೂಸುಧಾರಣೆ ಕಾಯ್ದೆ 122–ಎ ರನ್ವಯ ಪರಿಶೀಲಿಸಿ ಕ್ರಮ ತೆಗೆದುಕೊಳ್ಳಲು ಜಿಲ್ಲಾಧಿಕಾರಿಗಳಿಗೆ ಸೂಚಿಸಿದ್ದು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಭೂ ನ್ಯಾಯಮಂಡಳಿಯ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಕಂದಾಯ ಇಲಾಖೆಯಿಂದ ಅನುಮತಿ ನೀಡಲಾಗಿರುವುದರಿಂದ ಸದರಿ ಅಧಿಕಾರಿಯಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿದೆಯೆಂಬ ನಿರ್ಣಯಕ್ಕೆ ಬರಲು ಸಾಧ್ಯವಾಗದು. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 70 ಕೆಇವಿ 2008, ಬೆಂಗಳೂರು, ದಿನಾಂಕ: 15ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ದಿ: ಶ್ರೀ ಮೋಹನ್ ಕುಮಾರ್ ಸಾಸನೂರು ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿರುವ ಇಲಾಖಾ ವಿಚಾರಣೆಯನ್ನು ಕೈ ಬಿಡಲಾಗಿದೆ. ಇವರು ಅಮಾನತ್ತಿನಲ್ಲಿ ಕಳೆದ ಅವಧಿ ಅಂದರೆ ದಿ: 28–10–08 ರಿಂದ ದಿ: 01–07–09ನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 1957 ರ ನಿಯಮ 100(3)ರ ಪ್ರಕಾರ ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–2)

ಪಿ.ಆರ್.ನಂ. 1803

